



Photo by N. Ramakrishna

ಕೆಸರಿನಲ್ಲಿನ ಮಾಣಿಕ್ಯ

ಪ್ರಿಯವಾಚಕರೇ,

ಚಂದಮಾಮನು ದಿನ ದಿನಕ್ಕೂ ಹೆಚ್ಚು ಜನ ಪ್ರಿಯನಾಗುತ್ತಿರುವುದು ಸಂತೋಷದ ಸಂಗತಿ. ಅದನ್ನು ಹೆಚ್ಚು ಓದುಗರ ಅಭಿಪ್ರಾಯ ತಿಳಿದು ಮತ್ತೂ ಉತ್ತಮಗೊಳಿಸುವುದಕ್ಕಾಗಿ ಓದುಗರ ಸಲಹೆ ಅಭಿಪ್ರಾಯಗಳನ್ನು ತಿಳಿಯಲು ಆಶಿಸುತ್ತೇವೆ.

ಚಂದಾದಾರರಾಗಲು ಇಷ್ಟಪಡುವ ಅನೇಕರು ಚಂದಮಾಮ ಪ್ರತಿಯನ್ನು ವಿ. ಪಿ. ಮೂಲಕ ಕಳುಹಿಸಲು ಕೇಳುತ್ತಾರೆ. ಆದರೆ ಕಾರಣಾಂತರದಿಂದ ನಾವು ವಿ. ಪಿ. ಗಳನ್ನು ಕಳುಹಿಸುವ ಪದ್ಧತಿ ಇಟ್ಟಿಲ್ಲವೆಂದು ಈ ಮೂಲಕ ತಿಳಿಸಲು ಅಪೇಕ್ಷಿಸುತ್ತೇವೆ. ಮತ್ತು ಒಂದು ವರ್ಷಕ್ಕೆ ಕಡಿಮೆಯ ಚಂದಾ ಸ್ವೀಕರಿಸಲಾರೆವು. ಇಷ್ಟಪಡುವವರು 5 ರೂಪಾಯಿಗಳನ್ನು ನಮಗೆ ಮನಿಯಾರ್ಡರ್ ಮೂಲಕ ಕಳುಹಿಸಿ ಚಂದಾದಾರರಾಗಬಹುದು. ಪತ್ರವ್ಯವಹಾರಕ್ಕೆ ಕೆಳಗಿನವಿಳಾಸವನ್ನು ಇಂಗ್ಲಿಷಿನಲ್ಲಿ ಬರೆದರೆ ನಮಗೆ ಜಾಗ್ರತೆ ತಲುಪುತ್ತದೆ.

ಸಂಪಾದಕ.

CHANDAMAMA PUBLICATIONS,
P. B. 1686, MADRAS—1.



ಚಿಕ್ಕ ಬಾಲಕ ಬಾಲಕಿಯರೇ.

ನಿಮಗೆಲ್ಲಾ ಬೇಕಾದ ವಿಷಯಗಳನ್ನು ಚಂದಮಾಮ ಸದಾ ಕೊಡಲು ಸಿದ್ಧ. ಅದಕ್ಕೆ ನಿಮಗೆ ಎಂತಹ ಕತೆ, ಪದ್ಯ ಚಿತ್ರಗಳು ಇಷ್ಟವೆಂದು ನಮಗೆ ತಿಳಿಸಿದಲ್ಲಿ ಅದನ್ನು ಚಂದಮಾಮ ಪ್ರಕಟಿಸಲು ಪ್ರಯತ್ನಿಸುತ್ತಾನೆ.

## ಚಂದಮಾಮನಲ್ಲಿ
### ಈ ಸಲ



ಇವಲ್ಲದೆ ಚಿತ್ರದೊಗಟು, ಕಂಡುಹಿಡಿ; ಇತ್ಯಾದಿ ವಿಷಯಗಳೆಷ್ಟೋ.



### ಏಜೆಂಟರುಗಳಿಗೆ ಸುಸಂಧಿ

ಏಜೆಂಟರುಗಳಿಲ್ಲದ ದೊಡ್ಡ ಪುಟ್ಟ ಹಳ್ಳಿಗಳಲ್ಲಿ ಚಂದಮಾಮನ ಮಾರಾಟಗಾರರು ರೂ. ೨-೦-೦ ಮಾತ್ರ ಕಳಿಸಿ ೭ ಪ್ರತಿಗಳನ್ನು ಪಡೆದು ರೂ. ೦-೧೦-೦ ಗಳ ಲಾಭವನ್ನು ಪಡೆಯಬಹುದು. ೧೫ರಿಂದ ೨೦ನೇ ತಾರೀಖಿನ ಒಳಗಾಗಿ ರೂ. ೨-೦-೦ನ್ನು ಮನಿಯಾರ್ಡರು ಕಳಿಸಿ ನಿಮ್ಮ ೭ ಪ್ರತಿಗಳನ್ನು ಪಡೆಯಿರಿ.

ಬಿಡಿ ಸಂಚಿಕೆ ಪ್ರತಿ ಒಂದಕ್ಕೆ
**ರೂ. ೦-೩-೦ ಮಾತ್ರ.**

* ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

CHANDAMAMA OFFICE
P. B. 1686, MADRAS—1.

# ಮುಖಚಿತ್ರ

ಗೋಕುಲದಲ್ಲಿ ದಿನದಿನಕ್ಕೆ ಕೃಷ್ಣನ ಹಾವಳಿ ಹೆಚ್ಚುತ್ತಿದೆ. ಕಂಸ ಕೃಷ್ಣನನ್ನು ಕೊಲ್ಲಲು ಉಪಾಯಗಳ ಮೇಲೆ ಉಪಾಯಗಳನ್ನು ಹೂಡುತ್ತಿದ್ದಾನೆ. ಪೂತನಿ ಬಂದು ಸತ್ತಳು, ಶಕಟಾಸರ ಸತ್ತ, ತೃಣಾವರ್ತ ವಾಯುರೂಪದಲ್ಲಿ ಬಂದು ಕೊಲ್ಲಲು ಯತ್ನಿಸಿ ಅವನೂ ಅದೇ ಗತಿ ಹೊಂದಿದ.

ಇಷ್ಟು ಗಂಡಾಂತರಗಳು ಬಂದರೂ ವಿಷ್ಣುವಿನ ದಯೆಯಿಂದ ಎಲ್ಲಾ ಕಷ್ಟಗಳೂ ನಿವಾರಣೆಯಾಗಿಹೋದುವು. ಈ ರೀತಿಯ ಭಯದಿಂದಿರುವುದು ಎಂದಿನವರೆಗೆ? ಊರಿನವರೆಲ್ಲಾ ಸೇರಿ ಏನಾದರೂ ಒಂದು ಉಪಾಯ ಮಾಡಿ ಈ ಭಯದಿಂದ ಮುಕ್ತರಾಗಲು ಯೋಚಿಸ ತೊಡಗಿದರು. ಒಬ್ಬ ಬುದ್ಧಿವಂತ ಅವರಿಗೆ ಹೀಗೆ ಹೇಳಿದ :—

ಮಿತ್ರರೇ ! ಈ ಊರಲ್ಲೇ ಇದ್ದರೆ ನಮ್ಮ ಕಷ್ಟ ನೀಗುವಂತಿಲ್ಲ. ಸ್ಥಳ ಬದಲಾಯಿಸಿ ಎಲ್ಲರೂ ಇಲ್ಲಿಗೆ ಹತ್ತಿರದಲ್ಲೇ ಇರುವ ಬೃಂದಾವನಕ್ಕೆ ಹೋಗೋಣ. ಅಲ್ಲಿ ಪಶುಗಳಿಗೆ ಮೇಯಲು ಹುಲ್ಲೂ ನೀರೂ ಮನೆ ಮಠಗಳನ್ನೂ ಕಟ್ಟಿಕೊಳ್ಳಲು ವಸತಿ ಸಹ ಇದೆ. ಅಲ್ಲಿ ಹೋಗಿ ಸುಖವಾಗಿರಬಹುದು." ಎಂದು ಸಲಹೆ ಕೊಟ್ಟ.

ಈ ಉಪಾಯ ಬಹಳ ಒಳ್ಳೆಯದೆಂದು ಎಲ್ಲರೂ ಒಪ್ಪಿದರು. ಬೃಂದಾವನಕ್ಕೆ ಹೊರಡಲು ಎಲ್ಲರೂ ಸಿದ್ಧರಾದರು. ಗಾಡಿಗಳು ಬಂದಿವೆ. ಸಾಮಾನು ಭರ್ತಿ ಮಾಡಿ ಸಿದ್ಧವಾಗಿದ್ದಾರೆ. ಭಜನೆ ನಡೆಯುತ್ತಾ ಇದೆ. ವಾದ್ಯಗಳನ್ನು ಬಾರಿಸಿಕೊಂಡು ಹೊರಡುತ್ತಿದ್ದಾರೆ. ಎಲ್ಲರೂ ಬೃಂದಾವನಕ್ಕೆ ಬರುವ ಹಾದಿಯಲ್ಲಿದ್ದಾರೆ.




ಸಂಪುಟ ೩ | ಜೂಲೈ ೧೯೪೯ | ಸಂಚಿಕೆ ೧

# ಸಂಪಾದಕೀಯ

"ಚಂದಮಾಮ" ನನ್ನು ಬಡವರಿಗೆ, ಹರಿಜನರಿಗೆ ಕೊಳ್ಳಲು ಅನುಕೂಲವಾಗುವಂತೆ ಇದರ ಚಂದಾಹಣವನ್ನು ಕಡಿಮೆ ಮಾಡಿದ್ದೇವೆ. ಕೇವಲ ಇಚ್ಛೆಯಿದ್ದೂ ಕೊಳ್ಳಲಾರದಂತಹವರಿಗೆ ಅನುಕೂಲಪಡಿಸುವುದಕ್ಕಾಗಿ ಈ ಉದ್ದೇಶ. ರಿಯಾಯಿತಿಯ ಚಂದಾದರ ವರ್ಷಕ್ಕೆ ನಾಲ್ಕೇ ರೂಪಾಯಿ.

ಬಡವರೂ ಮತ್ತು ಬಡ ಹರಿಜನರೂ ಈ ಸುಸಂಧಿಯ ಅನುಕೂಲ ಪಡೆದು ಕೇವಲ ರೂ. ೪-೦-೦ ನ್ನು ನಮಗೆ ಕಳುಹಿಸಿ ಈಗಲೇ ಚಂದಾದಾರರಾಗಬಹುದು. ಈ ರಿಯಾಯಿತಿಯು ಇದೇ ಜುಲೈ ತಿಂಗಳಿನ ಅಂತ್ಯದವರೆಗೆ ಮಾತ್ರ ಇದೆ. ಬಡವರುಮಾತ್ರ ಈ ಅನುಕೂಲ ಪಡೆಯುವರೆಂದು ನಂಬಿ ಆಶಿಸುತ್ತೇವೆ.

ಸಂಪಾದಕ.




ರಾಮಬಾಯಿ

ಉಗೆಗಾಡಿ ಕೈಮರದ
ಬಳಿಯೊಂದು ಮಾಮರ
ಅಲ್ಲೊಂದು ಕಾಗೆ ಮರಿ
ಬಂದು ಪೋಪುದನೋಡಿ
ಕೊಂಬೆಯೊಂದರಮೇಲೆ.

* * *

ಉಗೆ ಗಾಡಿ ಬರುವುದು
ಬಂದದ್ದು ಪೋಪುದು
ನೋಡಿ, ಹಾರಲೆಣಿಸಿ
ರೆಕ್ಕೆ ಹೊಡೆದುದು ಅಂದು
ಹಾರಿ ಬಂದು ಬಳಗವ
ಕರೆಯಲೆಂದು ಕೊಂಬೆ
ಯೊಂದ ನೋಡಿ ಕೂತಿತು.

* * *

ನಾಕರೆದರೆ " ಉಗೆಬಂಡಿ
ಬಂದೀತು "
"ಹೋಗೆಂದು ಹೇಳಿದೊಡೆ
ಹೋದೀತು "
ಎಂದನುತ ಬಳಗವನು ಕರೆಯಿತು

* * *

ಈಗ ಕರೆ ನೋಡೋಣ
ಉಗೆ ಬಂಡಿ ಬಂದೀತೇ?
ಎಂದೆನುತ ಬನಗ ವೇಳೆ
ಕಾಗೆ ಮರಿ ಕೂಗಿತಾಗ
ಉಗೆ ಬಂಡಿಯನ್ನೀಗ ಕರೆ
ತರುವೆನೋಡಿ ಬನ್ನಿ ಬಳಗವೇ
ಬಾಗಾಡಿ ಬಾಗಾಡಿ ಎಂದು
ಕಾಗೆ ಮರಿ " ಕಾವ್ ಕಾವ್" ಎಂದಿತು
ಉಗೆಗಾಡಿ ಉಗೆಯುಗುಳಿ
ಬಂತು ಬಂದದ್ದು ನಿಂತಿತು.
ಗಾರ್ಡನೂದಿದ ಸೀಟಿಯ
ನು ಕೇಳಿ ಕಾಗೆ ಉಗೆಗಾ
ಡಿಯನ್ನಾಗ ಪೋಗೆಂದಿತು.

ಉಗೆಯುಗುಳಿ ಗಾಡಿಯದು
ಪೋಗೆ ಕಾಗೆ ಬಳಗವು
ಮರಿ ಕಾಗೆ ಯುಕ್ತಿ
ಯನು ಕಂಡು ಬೊಗಳೆ
ಮರಿ ಇದರ ಹೆಮ್ಮ ನೋಡೆಂ
ದು ಹಾರಿದುವು.

* * *

ತನಗಾದ ಅವಮಾನ
ಸೈಸಲಾರದೆ ಮರಿಯು
ಅಸುವ ನೀಗಿತು ನೋಡಿ
ಹೆಮ್ಮೆಗಾರರಿಗಿದು ಅರಿವ
ಲ್ಲವೇ? ಅರಿತು ಕಲಿಯಿರಿ ಮರಿಗಳೇ






ತಾಯಿ

ಕೇಳೆಲೊ ಕೇಳೆಲೊ ರಂಗ
ಹೊಗೆಬತ್ತಿಯ ಬಿಡೆಲೋ ಮಂಗ

ಮಗ

ನೀತಿಯನೆನಗೇ ಪೇಳುವೆಯೇ!
ತಾತನದೇಕೆ ಹೊಗೆ ಎಳೆಯುವಹೇಳು?

ತಾಯಿ

ಹಿರಿಯರಿಗಲಿದ್ದರೆ ತಾನೇ
ಕಿರಿಯರು ಕೆಡಡಿದ್ದಾರು—
ಮೂರ್ಖತೆಯನು ಬಿಡು ನೀನು
ಹಾಟಗಾರ ನೆನಿಸದಿರು ನೀನು.

ಮಗ

ನಿನಗೋದೋ ಬಾರದು ಅಮ್ಮಾ!
ನನಗೇ ನೀತಿಯ ಪೇಳುತಲಿರುವೆ.

ತಾಯಿ

ಓದೇಬಾರದ ನೆಪವಾಗಿ
ನನ್ನನುನೀಕಾಡುತಲಿರುವೆ
ಹಾಳೂ ಮೂಳೂ ತಿನಬೇಡ
ಆರೋಗ್ಯವನೇನೀಗಬೇಡ.

ಮಗ

ತಿನದಿದ್ದರೆ ಹೊಡೆಯುವೆ ನೀನು
ತಿಂದರೆ ರೋಗ ಬಂದೀತೆನ್ನುವೆ.

ತಾಯಿ

ಕೊಟ್ಟುದ ತಿಂದು ಏಟನು ತಿನ್ನದೆ
ಕೈಯಲಿ ಹಣ ಬಂದಾಗ
ಕಸುಕೊಳ್ಳುವುದನು ಬಿಡು ನೀನು.

ಮಗ

ಖರ್ಚಿಗಿಲ್ಲದ ಹಣವೇತಕೆ ಪೇಳೇ

ಮುರಳೀಧರ

ತಾಯಿ

ಗಳಿಸಿದ ಹಣದಲಿ ಅರ್ಧವ
ಉಳಿಸಿ ಶುಚಿ ರುಚಿಯಿಂದಿರು
ವುದ ಕಲಿತು ಗಣಿಯಾಗಿರೂ ಕಂದಾ!

ಮಗ

ಉಣಲಿಲ್ಲ ಹಿಡಿಯುಣಿಸು
ಮೀಸೆಗೆ ಮೀಯಲು ಬೆಣ್ಣೆ ?

ತಾಯಿ

ಇದ್ದುದರಲ್ಲೇ ಸುಖಿಯಾಗಿ
ಸಟೆಯಾಡದೆ ಬಾಳ್ವರು
ಇಲ್ಲವೆರಂಗ, ಸಟೆಯಾಡಿ
ಕೆಡೆದಿರೆಲೋ ನೀನು.

ಮಗ

ದಿನವೆಲ್ಲ ಹಿರಿಯರಿಗಿದೋ ಕಜ್ಜ

ತಾಯಿ

ನೆರೆಯರಾಸ್ತಿಗಾಶೆಪಟ್ಟು
ಕಳುವಮಾಡಿ ಕಳ್ಳನೆನಿಸದಿರು.

ಮಗ

ತಿಂದಮೇಲೆ ತೇಗದವರದಾರಮ್ಮಾ
ತಿರಿದು ಹಣವಗಳಿಸಿದವರು ಯಾರು

ತಾಯಿ

ಹಿರಿಯರೆಂದ ಮಾತ ಕೇಳು
ಮೀರಿ ಕೂತ ನಾಡಬೇಡ

ಮಗ

ಗಡ್ಡವೇ ನಿಂತೆನಾದರೆ
ನಾನುಕೂಡ ಹಿರಿಯನೇ?

ತಾಯಿ

ಬೊಗಳೆ ಮಾತ ಕಲಿತೆ ನೀನು
ಬೇಗ ನಿನ್ನ ಬೀದಿ ಗಟ್ಟುವೆ

ಮಗ

ಮಾತಿಗೆ ಮಾತು ಬೆಳೆದು ಬಂತು
ಮನ್ನಿಸೆನ್ನ ಮಾತು ತಾಯೆ.





# ಬಿಸಿಲಿನಿಂದ

ಒರಿದಾನೊಂದು ಸಮಯದಲ್ಲಿ ಜಮದಗ್ನಿ ಎಂಬ ಒಬ್ಬ ಮಹರ್ಷಿಗಳು ನಮ್ಮ ದೇಶದಲ್ಲಿ ಇದ್ದರು. ಅವರು ಮಹಾ ತಪಸ್ವಿ. ಅವರ ಹೆಂಡತಿ ಹೆಸರು ರೇಣುಕಾದೇವಿ.

ಜಮದಗ್ನಿಗೆ ಬಿಲ್ಲುಗಾರಿಕೆ ಎಂದರೆ ಬಹಳಆಸಕ್ತಿ. ಅದಕ್ಕಾಗಿ ಆತ ಪ್ರತಿದಿನವೂ ತನ್ನ ಆಶ್ರಮದ ಬಳಿ ಇದ್ದ ಒಂದು ದೊಡ್ಡ ಮೈದಾನದಲ್ಲಿ ಕೂತು ಬತ್ತಳಿಕೆಯಿಂದ ಬಾಣಗಳನ್ನು ತೆಗೆದು ಧನುಸ್ಸನ್ನು ಮೇಲೇರಿಸಿ ಬಿಡುವುದು. ಹೋದ ಬಾಣಗಳನ್ನು ಆರಿಸಿ ತಂದು ಕೊಡುವುದಕ್ಕೆ ರೇಣುಕೆಯನ್ನು ಕಳುಹಿಸುವುದು. ಇದೇ ಒಂದು ಕೆಲಸ.

ಹೀಗೇ ಸ್ವಲ್ಪ ಕಾಲ ಪ್ರತಿ ದಿನವೂ ನಡೆಯುತ್ತಿತ್ತು. ಒಂದು ದಿನ ಜಮದಗ್ನಿ ಬಿಟ್ಟ ಬಾಣಗಳನ್ನು ಆರಿಸಿ ತರಲು ರೇಣುಕೆ ಹೊರಟಳು. ಮಧ್ಯಾಹ್ನದ ಸಮಯ. ಹೋದವಳು ಬಹಳ ಹೊತ್ತು ಬರಲಿಲ್ಲ. ದಿನವೂ ಜಾಗ್ರತೆ ಬರುತ್ತಿದ್ದವಳು ಇಂದೇಕೆ ಇಷ್ಟು ತಡ ಮಾಡಿದಳೆಂದು ಆ ಋಷಿಗೆ ಆತುರ. ನೋಡಿ ಸಾಕಾಯಿತು. ಕೊನೆಗೆ ತನ್ನ ಜ್ಞಾನದೃಷ್ಟಿಯಿಂದ ನೋಡಿದ.

ಹೀಗೇ ನೋಡುತ್ತಿರುವಾಗ್ಗೆ ಆಕೆ ಬಿಸಿಲಿನ ಬೇಗೆಯಿಂದ ಬಳಲಿ ಬೇಸತ್ತು ನಡೆಯಲಾರದೆ ಒಂದೆಡೆ ಸುಸ್ತಾಗಿ ಕೂತಿರುವುದನ್ನು ಕಂಡ. ಇಷ್ಟು ಬೇಗೆಗೆ ಕಾರಣ ಸೂರ್ಯನೆಂದರಿತ. ಆಗ ಆತನಿಗೆ ಸೂರ್ಯನೇ ಇದಕ್ಕೆ ಕಾರಣವೆಂದರಿತು ಧನುಸ್ಸು ಬಾಣಗಳನ್ನು ಹಿಡಿದು ಸೂರ್ಯನಿಗೆ ಗುರಿಯಿಟ್ಟು ಹೊಡೆಯಲಾರಂಭಿಸಿದ. ಇದನ್ನು ನೋಡಿ ಸೂರ್ಯ ತಾನೊಬ್ಬ ಬ್ರಾಹ್ಮಣನ ವೇಷವನ್ನು ಧರಿಸಿಕೊಂಡು ಜಮದಗ್ನಿಯ ಬಳಿಗೆ ಬಂದ.

"ರಾಮಸ್ವಾಮಿ"

# ಬಿಡುಗಡೆ



"ತಾವು ಅತಿ ಕೋಪದಿಂದ ಜಗತ್ತಿಗೇ ಸಾಕ್ಷಿಯಾದ ಸೂರ್ಯನನ್ನು ಬಾಣದಿಂದ ಹೊಡೆಯಲಾರಂಭಿಸಿದ್ದೀರಲ್ಲಾ. ಸೂರ್ಯನ ಬೆಳಕು, ಕಾವು ಇಲ್ಲವಾದರೆ ಜಗತ್ತೇ ನಾಶ. ಎಲ್ಲಾ ವಿಷಯಗಳನ್ನೂ ಅರಿತ ನೀವೇ ಹೀಗೆ ಕೋಪಿಸಿದರೆ ಹೇಗೆ?" ಎಂದು ಆ ಬ್ರಾಹ್ಮಣ ಕೇಳಿದ.

"ನನ್ನ ಕೋಪಕ್ಕೆ ಕಾರಣ ತಮಗೆ ತಿಳಿಯದು. ನನ್ನ ಪ್ರಿಯ ಸತಿಗೆ ಈ ಸೂರ್ಯ ಕೊಡುತ್ತಿರುವ ಕಷ್ಟ ಅಷ್ಟಿಷ್ಟಲ್ಲ. ನಾನಾತನನ್ನು ಕ್ಷಮಿಸಲಾರೆ." ಎಂದು ಜಮದಗ್ನಿ ಹೇಳಿದ.

ಆಗ ಬ್ರಾಹ್ಮಣನ ವೇಷವನ್ನು ಧರಿಸಿದ್ದ ಸೂರ್ಯ ಪ್ರತ್ಯಕ್ಷನಾಗಿ ಕ್ಷಮಾಪಣೆ ಬೇಡಿದ. ಆತನು ಬೇಡುತ್ತಿರುವುದನ್ನು ನೋಡಿ ಜಮದಗ್ನಿಯ ಕೋಪ ಶಾಂತವಾಯಿತು. ಆಗ ಸೂರ್ಯನನ್ನು ಕುರಿತು "ನನ್ನ ಸತಿಗೆ ನೀನು ಇಷ್ಟು ಕಷ್ಟ ಕೊಟ್ಟಿರುವೆಯಲ್ಲಾ, ಅವಳ ಕಷ್ಟವನ್ನು ನೋಡಿ ಸಹ ನಾನು ಹೇಗೆ ಸುಮ್ಮನಿರಲಾದೀತು." ಎಂದ.

ಆಗ ಸೂರ್ಯನು "ಛತ್ರಿ", "ಮೆಟ್ಟು" ಎಂಬ ಎರಡು ವಸ್ತುಗಳನ್ನು ತಯಾರುಮಾಡಿ ಜಮದಗ್ನಿಗೆ ತಂದುಕೊಟ್ಟು ಹೀಗೆ ಹೇಳಿದ–

"ಮಹಾತ್ಮಾ, ಈ ಎರಡು ವಸ್ತುಗಳು ಬಹಳ ಅಪೂರ್ವವಾದವುಗಳು. ಮೆಟ್ಟಿನ ಬಲದಿಂದ ನನ್ನ ಕಾವು ಕಾಲಿಗೆ ತಗುಲುವುದಿಲ್ಲ. ಛತ್ರಿಯ ಬಲದಿಂದ ನನ್ನ ಕಿರಣಗಳು ಶರೀರಕ್ಕೆ ತಗುಲುವುದಿಲ್ಲ." ಎಂದು ಹೇಳಿ ಆತನು ಹೊರಟುಹೋದ.

ಅಂದಿನಿಂದ ಭೂಲೋಕದಲ್ಲಿ ಛತ್ರಿ ಮತ್ತು ಮೆಟ್ಟುಗಳನ್ನು ಉಪಯೋಗಿಸುತ್ತಾ ಮಾನವರೆಲ್ಲಾ ಸೂರ್ಯನ ಶಾಖದಿಂದ ತಮ್ಮನ್ನು ರಕ್ಷಿಸಿಕೊಳ್ಳುತ್ತಾ ಸುಖದಿಂದಿದ್ದಾರೆ.



# ಮಗುವಿನ ಆಶೆ

"ಕಂದ"

ಆಡಿ ಆಟ ಹಾಡಿ ಹಾಡ
ಅಲೆದು ಬಂದೆನೇ!
ಸೀಯಾದ ಸಕ್ಕರೆಯ
ಬತ್ತಾಸು ತಿನಿಸಮ್ಮಾ
ಪುಸ್ಸೀ ಮರಿಯು
ಮುಚ್ಚೀ ಕಣ್ಣ
ಮಣೆಯನೇರಿತು
ಬಾಲವಾಡಿಸಿ ಬಂತು,
ನೋಡೇ ನಾಯಿಮರಿಯು
ಹೊಟ್ಟೆ ಹಸಿದಿದೆ, ಹೊತ್ತು ಸಾಗಿದೆ.
ಸೀಯಾದ ಸಕ್ಕರೆಯ
ಬತ್ತಾಸು ತಿನಿಸೇ!
ಗೂಡಿನ ಒಳಗಣ
ಮಿಠಾಯಿ ಚೂರು ಕೊಡು ಅಮ್ಮಾ!
ಪೆಟ್ಟಿಗೆಯೊಳಗಣ ಕಾಯಿ ಕೂಡ
ನನಗೆ ಬೇಕಮ್ಮಾ
ಅಟ್ಟದ ಮೇಲಣ ಅವಲಕ್ಕಿ
ಹಾಲಿಗೆ ಹಾಕಿ ತಿನಿಸಮ್ಮಾ
ಸೀಯಾದ ಸಕ್ಕರೆಯ
ಬತ್ತಾಸು ತಿನಿಸಮ್ಮಾ




**ಬಾ**ಲನಾಗಮ್ಮನನ್ನು ಮಾಯಾ ಫಕೀರನು ಹೊತ್ತುಕೊಂಡು ಹೋದ ಸಮಾಚಾರವು ಹಾನುಗಲ್ಲು ರಾಜ್ಯದಲ್ಲೆಲ್ಲಾ ಹರಡಿತು. ತೊಟ್ಟಿಲಲ್ಲಿದ್ದ ಹಸುಗೂಸನ್ನು ನೋಡಿ ಬಾಲ ನಾಗಮ್ಮನ ಅಕ್ಕಂದಿರು 'ಅಯ್ಯೋ ಮಗುವೇ, ಎಷ್ಟು ದುರಾದೃಷ್ಟನೋ ನೀನು! ನೀನು ಹುಟ್ಟುವ ಮೊದಲೇ ನಿನ್ನ ತಂದೆಯವರು ಗಂಡೀಕೋಟೆಗೆ ಹೋದರು. ನೀನು ಹುಟ್ಟಿದ ಕೂಡಲೇ ನಿನ್ನ ತಾಯಿಯನ್ನು ಮಾಯಾ ಫಕೀರನು ಸೆರೆಹಿಡಿದುಕೊಂಡು ಹೋದನು.' ಎಂದು ಪ್ರಲಾಪಿಸಿದರು.

ಹಾನುಗಲ್ಲು ನಗರಾಧಿಕಾರಿಗಳು ಮತ್ತು ಸಮಸ್ತ ಜನಗಳು ಸಭೆ ಸೇರಿದರು. ತಮಗೆ ತಿಳಿಯದಂತೆ ಮಾಯಾಫಕೀರನು ಮಾಡಿದ ಮಾಟಕ್ಕೆ ಬಹಳ ಅವಮಾನಪಟ್ಟರು. ಗಂಡೀಕೋಟೆಗೆ ವರ್ತಮಾನ ತಲುಪಿಸಲು ತೀರ್ಮಾನಿಸಿದರು. ಜನರ ಮೂಲಕ ಸಮಾಚಾರ ಕಳುಹಿಸಿದರೆ ಬೇಗ ಕೆಲಸವಾಗುವಂತಿಲ್ಲ. ಅವರು ದಟ್ಟವಾದ ಅರಣ್ಯಗಳನ್ನು ದಾಟಿ ಅತಿ ಬೇಗನೆ ಸುದ್ದಿ ಮುಟ್ಟಿಸಲು ಸಾಧ್ಯವಿಲ್ಲ. ಆದ್ದರಿಂದ ಪಾರಿವಾಳಗಳ ಉಪಯೋಗಪಡೆದರು. ಬಾಲನಾಗಮ್ಮನಿಗೆ ಮಗನು ಹುಟ್ಟಿರುವನೆಂದೂ, ಏಳು ದಿನದ ಬಾಣಂತಿಯನ್ನು ನಾಗರಗುಡ್ಡದ ಮಾಯಾ ಫಕೀರನು ಸೆರೆ ಹಿಡಿದುಕೊಂಡು ಹೋದನೆಂದೂ, ಮೊಲೆಗೂಸಿಗೆ ದಾದಿಯರು ಹಾಲೆರೆದು ಸಾಕುತ್ತಿರುವರೆಂದೂ, ಕಾಗದ ಬರೆದು ಪಾರಿವಾಳಗಳ ಕೊರಳಿಗೆ ಕಟ್ಟಿ ಹಾರಿಸಿದರು. ಮೂರು ಗಂಟೆಗಳೊಳಗೆ ಪಾರಿವಾಳಗಳು ಗಂಡೀಕೋಟೆಯನ್ನು ಸೇರಿದುವು.

ಕಾಗದದಲ್ಲಿರುವ ವಿಚಾರವನ್ನು ಕೇಳಿದ ಕೂಡಲೇ ಏಳು ಜನ ಅಣ್ಣ ತಮ್ಮಂದಿರೂ ಕೋಪದಿಂದ ಕೆಂಡವಾದರು. ಅವರ ಸಂಗಡ ಹನ್ನೆರಡು ಸಾವಿರ ಸೈನಿಕರಿದ್ದರು. ಇನ್ನೂರು ಫಿರಂಗಿಗಳಿದ್ದವು. ಈ ಸೈನ್ಯದೊಂದಿಗೆ



ನಾಗರಗುಡ್ಡದ ಕೋಟೆ ಮೇಲೆ ಬಿದ್ದು, ಶ್ರೀರಾಮನು ರಾವಣಾಸುರನನ್ನು ಸಂಹರಿಸಿ ಸೀತಾದೇವಿಯನ್ನು ತಂದ ಹಾಗೆ, ಫಕೀರನನ್ನು ಕೊಂದು ಬಾಲನಾಗಮ್ಮನನ್ನು ತರಲು ಸನ್ನಾಹ ಮಾಡಿದರು. ಶಂಖಗಳು ಮೊಳಗಿದುವು. ಡಂಗೂರ ಹೊಡೆದರು. ಕುದುರೆಗಳ ಮೇಲಿಂದ ರಣಭೇರಿಗಳು ಧ್ವನಿಗೈದುವು. ಅಟ್ಟಹಾಸದಿಂದ ಸೈನ್ಯವು ನುಗ್ಗಿತು. ಹುಲಿರಾಜ ಪಟ್ಟಣ, ಗಂಗವಾದಿ ಪಟ್ಟಣಗಳನ್ನು ದಾಟಿ ನಾಲ್ಕನೇ ದಿನ ಸೈನ್ಯವು ನಾಗರಗುಡ್ಡದ ಕೋಟೆಯನ್ನು ನಾಲ್ಕು ಕಡೆಯಿಂದಲೂ ಮುತ್ತಿತು. ಬೆಳಗಾಗುವ ವೇಳೆಗೆ ಮದ್ದು ಗುಂಡು ತುಂಬಿ ಫಿರಂಗಿಗಳನ್ನು ಮೂರು ಸಾರಿ ಹಾರಿಸಿದರು. ಆದರೆ ಒಂದು ಗುಂಡೂ ಕೋಟೆಗೆ ತಗಲಲಿಲ್ಲ. ಕೋಟೆಯ ಒಳಗೂ ಬೀಳಲಿಲ್ಲ. ಗುಂಡುಗಳೆಲ್ಲವೂ ಮಧ್ಯ ದಾರಿಯಲ್ಲೇ ಸಿಡಿದು ಚೂರಾದುವು. ಎಲ್ಲಾ ಫಕೀರನ ಮಹಿಮೆ.

ಮೂರು ದಿನ ಒಂದೇ ಸಮನೆ ಎಲ್ಲ ಫಿರಂಗಿಗಳು ಗುಂಡು ಹಾರಿಸಿದರೂ ಕೋಟೆ ಮೇಲೆ ಯಾರೂ ಕಾಣಿಸಲಿಲ್ಲ. ಮನುಷ್ಯರು ಇರುವರೋ, ಇಲ್ಲವೋ ಎಂಬ ಸಂದೇಹವಾಯಿತು. ಏಣಿ ಹಾಕಿಸಿ ಕೆಲವರನ್ನು ಕೋಟೆ ಗೋಡೆಯ ಮೇಲೆ ಹತ್ತಿಸಿದರು. ಕೋಟೆಯೊಳಗೆ ಒಂದು ನರಪ್ರಾಣಿಯೂ ಕಾಣಿಸಲಿಲ್ಲ. ಫಕೀರನು ಸೆರೆ ಹಿಡಿದು ತಂದಿದ್ದ



ಹೆಂಗಸರು ಮಾತ್ರ ಅಲ್ಲಲ್ಲಿ ಕಾಣಿಸಿದರು. ಕೊನೆಗೆ ಫಕೀರನು ಮಸೀದಿಯ ಹೊರಗಡೆ ಸುಪ್ಪತ್ತಿಗೆಯ ಮೇಲೆ ಸುಖವಾಗಿ ನಿದ್ದೆ ಮಾಡುತ್ತಿರುವುದು ಕಾಣಿಸಿತು.

ಅವನನ್ನು ನೋಡಿದ ಕೂಡಲೇ ಹೊಸ ಹುಮ್ಮಸ್ಸಿನಿಂದ ಫಿರಂಗಿಗಳನ್ನು ಕೋಟೆಯ ಮೇಲೆ ಏರಿಸಿದರು. ಕೋಟೆಯ ಗೋಡೆಯ ಮೇಲೆ ಸೈನಿಕರು ಏರಿದ್ದನ್ನು ನೋಡಿ ಗೌಡರ ಸಂಗಿಯು "ಏಳೋ, ಫಕೀರ. ನಿನ್ನ ಗರ್ವ ಉಡುಗಿಸಲು ಶತ್ರುಗಳು ಬಂದಿದ್ದಾರೆ. ನಿನ್ನನ್ನು ಕೊಲ್ಲುತ್ತಾರೆ. ಏಳು" ಎಂದು ಎಚ್ಚರಿಸಿದಳು. ಆದರೂ ಫಕೀರ ಏಳಲಿಲ್ಲ. ಕೆಂಪಗೆ ಕಾದ ಸೌಟಿನಿಂದ ಬರೆಹಾಕಿದರೂ ಗೊರಕೆ ಹೊಡೆಯುತ್ತಲೇ ಇದ್ದ.

ಯೋಧರು ಮಾಯಾಫಕೀರನ ಕಡೆಗೆ ಕಡೆ ಗುಂಡು ಹಾರಿಸಿದರು. ತಿಗಣೆ ಕಡಿಯುತ್ತಿರಬಹುದೆಂದು ನೆನೆಸಿ ಎದ್ದು ನೋಡಿದ. ಶತ್ರುಗಳು ಬಂದಿರುವುದು ತಿಳಿಯಿತು. ತಕ್ಷಣವೇ ಮಸೀದಿಯ ಮೇಲಕ್ಕೆ ಹತ್ತಿದ. ಬಾಲನಾಗಮ್ಮ ಮಸೀದಿಯ ಒಳಗಡೆಯಿಂದ ತನ್ನ ಗಂಡನನ್ನೂ, ಭಾವಂದಿರನ್ನೂ ಅವರ ಸೈನ್ಯವನ್ನೂ ನೋಡಿ ಗೊಳೋ ಎಂದು ಅತ್ತಳು. ಪಾಪ! ಅವಳನ್ನು ನೋಡಿ ಫಕೀರ "ಏಕೆ, ಅಳೋದು? ಇವರು ನಮ್ಮನ್ನು ಏನೂ



ಯಾ ಖುದಾ' ಎಂದು ಹೇಳುತ್ತಾ ಶತ್ರು ಸೈನ್ಯದ ಮುಂದೆ ಬಂದು ನಿಂತ.

ತಕ್ಷಣ ಸಾವಿರ ಗಟ್ಟಲೆ ಸೈನಿಕರು ಫಕೀರನನ್ನು ಸುತ್ತುಗಟ್ಟಿದರು. ಅವನ ಶರೀರವನ್ನು ತುಂಡು ತುಂಡು ಮಾಡತೊಡಗಿದರು. ಮರುಕ್ಷಣವೇ ಅವನು ಇನ್ನೊಂದು ಕಡೆ ಹುಟ್ಟಿದ. ಅಲ್ಲೂ ಅವನ ತಲೆಯನ್ನು ಕಡಿದರು. ತಲೆ ಪುನಃ ಹುಟ್ಟಿತು.

ಈ ವಿಧವಾಗಿ ಅವನನ್ನು ಖಂಡ ತುಂಡವಾಗಿ ಕತ್ತರಿಸುತ್ತಿದ್ದರೂ, ಅವನು ಮತ್ತೆ ಹುಟ್ಟುತ್ತಲೇ ಇದ್ದ. ಕೊನೆಗೆ ಸೈನಿಕರೆಲ್ಲರೂ ಬಳಲಿ, ಅವನನ್ನು ಕೊಂದು, ಸುಟ್ಟು ಬೂದಿ ಮಾಡಿದರು. ಆ ಬೂದಿಯನ್ನು ಕೆರೆಯಲ್ಲಿ ಹಾಕಿದರು. ಆದರೆ ಫಕೀರ ಎದ್ದು ಬಂದ. "ಇಷ್ಟರವರೆಗೂ ನಿಮ್ಮ ಲಡಾಯಿ ಆಯಿತು. ಇನ್ನು ನಮ್ಮ ಲಡಾಯಿ ನೋಡಿ" ಎಂದು ಕೈಯಲ್ಲಿದ್ದ ವಿಭೂತಿಯನ್ನು ನಾಲ್ಕು ಕಡೆಗಳಿಗೂ ಎರಚಿದ.

ಆಶ್ಚರ್ಯವೇ ಆಶ್ಚರ್ಯ! ರಾಜರ ಆನೆಗಳೆಲ್ಲವೂ ಕರೀ ಕಲ್ಲುಗಳಾದುವು. ಕುದುರೆಗಳು ಬೆಣಚು ಕಲ್ಲುಗಳಾದುವು. ಒಂಟೆಗಳು ಕೆಂಪು ಕಲ್ಲುಗಳಾದುವು. ಹನ್ನೆರಡು ಸಾವಿರ ಸೈನಿಕರೂ ಕಲ್ಲಿನ ರಾಶಿಗಳಾದರು. ಫಿರಂಗಿಗಳು ನೀರಿನ ಮಡಿಕೆಗಳಾದುವು. ರಾಜಕುಮಾರರ ಡೇರಗಳು ಗೋರಂಟಿ ಪೊದೆಗಳಾದುವು. ಏಳು ಜನ ರಾಜರು ಹುತ್ತಗಳಾದರು. ಮಂತ್ರಿಗಳು ಶಿಲೆಗಳಾದರು.

ಮಾಡಲಾರರು. ನಮಗೇನೂ ಭಯವಿಲ್ಲ. ನನ್ನ ಏಟು ನೋಡು." ಎಂದು ಒಂದು ಲಾಠಿ ತೆಗೆದುಕೊಂಡು ಅದನ್ನು ಮಂತ್ರಿಸಿ ಕಳುಹಿಸಿದನು. ಆ ಲಾಠಿ ವೇಗದಿಂದ ಶತ್ರುಗಳೊಂದಿಗೆ ಯುದ್ಧ ಮಾಡಲಾರಂಭಿಸಿತು. ಅದರ ಹೊಡೆತ ತಾಳಲಾರದೆ ಸೈನಿಕರು ಓಡತೊಡಗಿದರು. ಲಾಠಿ ೩೦೦ ಜನ ಸೈನಿಕರನ್ನು ಸಾಯಿಸಿ ಫಕೀರನ ಕೈಗೆ ಬಂದು ಸೇರಿತು. ಯುದ್ಧ ಮುಗಿಯಲಿಲ್ಲ.

"ಈಗ ನಾನೇ ಹೋಗಿ ಲಡಾಯಿ ಮಾಡುತ್ತೇನೆ" ಎಂದ ಫಕೀರ. ಒಂದು ಟೋಪಿ ತಲೆಗೆ ಏರಿಸಿದ. ಕಂಬಳಿಯನ್ನು ಸೊಂಟಕ್ಕೆ ಬಿಗಿದ. ಕೈಯಲ್ಲಿ ಬೆತ್ತ ಹಿಡಿದು ಒಂದು ಹಿಡಿ ವಿಭೂತಿ ತೆಗೆದುಕೊಂಡು 'ಯಾ ಅಲ್ಲಾ,



ಈ ವಿಧವಾಗಿ ಯುದ್ಧ ಮಾಡುವವರೇ ಇಲ್ಲ ದಂತಾಯಿತು.

ಮಾಯಾಫಕೀರ ಬಾಲನಾಗಮ್ಮನ ಹತ್ತಿ ರಕ್ಕೆ ಹೋಗಿ 'ನೋಡು, ಹೆಣ್ಣೇ, ಇನ್ನು ನಮ್ಮಿಬ್ಬರಿಗೆ ಏನೂ ಅಡ್ಡಿ ಇಲ್ಲ. ಎಲ್ಲಿ, ಒಂದು ಮುತ್ತು ಕೊಡು' ಎಂದು ಆಕೆ ಯನ್ನು ಆಲಂಗಿಸಿಕೊಳ್ಳಲು ಹೋದ.

"ಲೋ, ಫಕೀರ, ನನ್ನ ಹನ್ನೆರಡು ವರುಷ ವ್ರತ ಮುಗಿಯುವ ಮುನ್ನ ನನ್ನನ್ನು ಮುಟ್ಟಿ ದೆಯೋ ನಿನ್ನ ತಲೆ ಚೂರಾಗಿ ಸಾಯುವೆ. ಜಾಗ್ರತೆ" ಎಂದಳು ಬಾಲನಾಗಮ್ಮ.

ಏಳು ಜನ ರಾಜರೂ, ಹನ್ನೆರಡು ಸಾವಿರ ಸೈನ್ಯವೂ ಒಂದೇ ಸಾರಿ ಸತ್ತುಹೋದರೆಂಬ ವಿಷಯ ತಿಳಿದ ಕೂಡಲೇ ಹಾನುಗಲ್ಲ ರಾಜ್ಯ ವೆಲ್ಲಾ ದುಃಖ ಸಮುದ್ರದಲ್ಲಿ ಮುಳುಗಿತು.

ಬಾಲನಾಗಮ್ಮನ ಅಕ್ಕಂದಿರು ತಮ್ಮ ಗಂಡಂದಿರಿಗಾಗಿ ಗೋಳೋ ಎಂದು ಅತ್ತರು. ತಾವೂ ಜೀವದಾಸೆ ಬಿಟ್ಟರು. ಆದರೆ ಅವರೂ ಸಹ ಸತ್ತುಹೋದರೆ ಬಾಲನಾಗ ಮ್ಮನ ಮಗನನ್ನು ಯಾರು ನೋಡಿಕೊಳ್ಳು ವರು? ಆರು ಜನರೂ ತಮ್ಮ ಹೃದಯಗ ಳನ್ನು ಕಲ್ಲಿನಂತೆ ಗಟ್ಟಿ ಮಾಡಿಕೊಂಡು, ಬಹಳ ಎಚ್ಚರಿಕೆಯಿಂದ ಮಗುವನ್ನು ಕಾಪಾಡುತ್ತಾ ಬಂದರು.

ಬಾಲನಾಗಮ್ಮನ ಮಗ ಬಾಲವರ್ಧಿರಾಜ ಬೆಳೆದು ಹುಡುಗನಾದ. ಐದನೇ ವರ್ಷ ಆದ ಕೂಡಲೇ ಅಕ್ಷರಾಭ್ಯಾಸ ಮಾಡಿಸಿ ದರು. ಒಂದೇ ಘಂಟೆಯಲ್ಲಿ ಓಂ ನಾಮ ಪೂರ್ತಿ ಮಾಡಿದ. ಮತ್ತೊಂದು ಘಂಟೆ ಯಲ್ಲಿ ಗಣಿತದಲ್ಲಿ ಗಟ್ಟಿಗನೆನಿಸಿದ. ನೋಡು ತ್ತಿದ್ದಂತೆಯೇ ಬಾಲವರ್ಧಿರಾಜ ಅಮರ, ಭಾರತ ಭಾಗವತ ರಾಮಾಯಣ, ಕಾವ್ಯ, ಅಲಂಕಾರ ಶಾಸ್ತ್ರಗಳೆಲ್ಲವನ್ನೂ ಓದಿ ಮುಗಿಸಿದ.

ಓದು ಮುಗಿದ ಕೂಡಲೇ ಬಾಲವರ್ಧಿ ರಾಜನು ಮಲ್ಲಯುದ್ಧ ಕಲಿತ. ಕತ್ತಿವರಸೆ, ಗದೆ ತಿರುಗಿಸುವುದು, ಬಿಲ್ಲು ಬಾಣ ಮುಂ ತಾದ ವಿದ್ಯೆಗಳನ್ನು ಕಲಿತುಕೊಂಡ. ಬಾಲನ ಪ್ರಜ್ಞೆ ನೋಡಿ ಪುರನಿವಾಸಿಗಳೆಲ್ಲರೂ ಸಂತೋಷಪಟ್ಟರು. ವಂಶಕ್ಕೆ ಕೀರ್ತಿ ತರುವನೆಂದರು.

ಒಂದು ದಿನ ನಂಬಿಯವರ ನರಸಮ್ಮ ಕೊಡವನ್ನು ಭುಜದ ಮೇಲಿರಿಸಿ ನೀರಿಗಾಗಿ

ಹೋಗುತ್ತಿದ್ದಳು. ಅದನ್ನು ನೋಡಿ ಬಾಲ ವದ್ದಿರಾಜ, ತನಗೆ ಎಷ್ಟುಮಟ್ಟಿಗೆ ಗುರಿ ಸಾಧಿಸಿದೆಯೋ ನೋಡೋಣ ಅಂತ ಮಡಿಕೆಗೆ ಗುರಿಯಿಟ್ಟು ಬಾಣ ಬಿಟ್ಟ. ನರಸಮ್ಮನ ಕೈಯಲ್ಲಿ ಇದ್ದ ಮಡಿಕೆ ಪುಡಿಪುಡಿಯಾಯಿತು. ಆಕೆಯ ಕಿರುಬೆರಳಿಗೆ ಪೆಟ್ಟು ತಗುಲಿ ರಕ್ತ ಕಾರಿತು. ಕೋಪ ಬಂದು ನರಸಮ್ಮ 'ನಿನ್ನ ತಾಯಿ ಬಾಲನಾಗಮ್ಮ ಮಹಾ ಪತಿವ್ರತೆ. ಆಕೆಯನ್ನು ಆ ಫಕೀರ ಸೆರೆ ಹಿಡಿದುಕೊಂಡು ಹೋದ, ಆದರೆ ನಿನಗೆ ಸಾವು ಬರಲಿಲ್ಲ.' ಎಂದು ಬೈದಳು.

ಆ ಮಾತು ಕೇಳಿ ಬಾಲವದ್ದಿರಾಜನು ನಿರ್ಭ್ರಾಂತನಾದ. ಆ ವಿಷಯ ಪೂರ್ತಿ ಹೇಳುವಂತೆ ಕೇಳಿಕೊಂಡ, ಬೆದರಿಸಿದ. ನರಸಮ್ಮ ಕಥೆಯನ್ನೆಲ್ಲಾ ಹೇಳಿದಳು. ತನ್ನ ತಾಯಿ ತಂದೆಯರ ಕಥೆಯನ್ನೆಲ್ಲಾ ಬಾಲವದ್ದಿರಾಜ ತಿಳಿದುಕೊಂಡ. "ಇದೆಲ್ಲಾ ನನಗೆ ತಿಳಿದಿರಲಿಲ್ಲ. ನನ್ನನ್ನು ಬಯ್ಯಬೇಡ. ನಾನು ನಿನ್ನ ಮಗನಂತೆ. ನೀನು ನನ್ನ ತಾಯಿಗೆ ಸಮ" ಎಂದ.

'ಬಾಲವದ್ದಿರಾಜ! ಸುಖವಾಗಿ ಬಾಳು, ಮಗು. ನಿನ್ನ ತಾಯಿಯನ್ನು ಕರೆದುಕೊಂಡು ಬಾ. ಆ ಮಾಯಾ ಫಕೀರನು ನಿನ್ನ ಕೈಯಿಂದಲೇ ಹತನಾಗುವನು." ಎಂದು ನರಸಮ್ಮ ಆಶೀರ್ವಾದ ಮಾಡಿದಳು.

ಬಾಲಕನು ನೆಟ್ಟಗೆ ಮನೆಗೆ ಹೋಗಿ ಆಲೋಚನೆ ಮಾಡುತ್ತಾ ಮಲಗಿಕೊಂಡ. ಸ್ನಾನಕ್ಕೆ ಬಾ ಅಂದರೆ ಬರಲೊಲ್ಲ. ಅನ್ನ



ತಿನ್ನಲೊಲ್ಲ. ಮಾತನಾಡಿದರೆ ಮಾತನಾಡಲೊಲ್ಲ. ಹೀಗಿರುತ್ತಿದ್ದ.

"ಮಗೂ, ಯಾರಾದರೂ ಬೈದರೇ? ಹೊಡೆದರೆ? ಯಾಕೆ ಮಾತನಾಡುವುದಿಲ್ಲ." ಎಂದು ತಾಯಂದಿರು ಕೇಳಿದರು. ಕೊನೆಗೆ ಬಾಲವದ್ದಿರಾಜ 'ನನ್ನ ತಾಯಿ ಯಾರು, ತಂದೆ ಯಾರು' ಎಂದು ಕೇಳಿದ.

ಅವರು 'ನಾವೇ ನಿನಗೆ ತಾಯಂದಿರು. ನಿನ್ನ ತಂದೆಯರು ತೀರಿಕೊಂಡರು' ಎಂದರು.

"ನಿಮ್ಮ ಆರು ಜನರ ಹೊಟ್ಟೆಯಲ್ಲೂ ನಾನು ಹುಟ್ಟಿದೆನೇ? ನಿಮ್ಮಲ್ಲಿ ನನ್ನನ್ನು ಹೆತ್ತವರು ಯಾರು? ಹೇಳುವಿರೋ, ಇಲ್ಲವೋ?" ಎಂದ ಬಾಲಕ. "ಅಯ್ಯೋ, ಅಪ್ಪಾ, ನಿನಗೆ ಇದನ್ನೆಲ್ಲಾ ಯಾವ ಬಂಜೆ

ಹೇಳಿದಳೋ? ಮಕ್ಕಳನ್ನು ಹೆತ್ತ ತಾಯಿ ಯಾವಳಾದರೂ ಹೇಳುವಳೇ?'' ಎಂದು ಅವರು ಶಪಿಸತೊಡಗಿದರು.

'ಒಬ್ಬರನ್ನು ಯಾಕೆ ಬೈಯ್ಯುವಿರಿ ಅಮ್ಮಾ. ನಿಮಗೆ ಬಂದ ಭಯವೇನೂ ಇಲ್ಲ. ನನ್ನ ತಂದೆ ತಾಯಿಯರು ಯಾರೋ ಅವರ ವಿಷಯ ಹೇಳಿ' ಎಂದ ಬಾಲವರ್ಧಿರಾಜ.

ಇನ್ನು ಬಚ್ಚಿಟ್ಟು ಪ್ರಯೋಜನವಿಲ್ಲವೆಂದು ಕೊಂಡು, ಅವರು ನಡೆದ ವಿಷಯವನ್ನೆಲ್ಲಾ ಹೇಳಿ 'ಈ ವಂಶಕ್ಕೆ ನೀನೊಬ್ಬನೇ ಉಳಿದೆ, ಮಗೂ. ನಿನ್ನನ್ನು ನಾವು ಹೂವಿನಂತೆ ಬೆಳೆಸಿದೆವು' ಎಂದರು.

'ನಾನು ಹೋಗಿ ನನ್ನ ತಾಯಿಯನ್ನು ನೋಡಿ ಬರುವೆನು. ನನಗೆ ಅನುಮತಿ ಕೊಡಿ' ಅಂದ ಬಾಲಕ. "ಅಯ್ಯೋ, ಮಗೂ, ನೀನು ಹೇಗೆ ಹೋಗುವೆ ಅಲ್ಲಿಗೆ? ಎಲ್ಲರನ್ನೂ ಕಲ್ಲಾಗಿಸಿದ. ಆ ಮಾಯಾಫಕೀರ ನಿನ್ನನ್ನು ಬದುಕಗೊಡುವನೇ? ನೀನು ಅಲ್ಲಿಗೆ ಹೋಗಲು ಹಠ ಹಿಡಿದರೆ ನಿನ್ನ ಕೈಯಿಂದಲೇ ನಾವು ಆರು ಜನಕ್ಕೂ ವಿಷವಿಟ್ಟು ಸಾಯಿಸಿ ಆಮೇಲೆ ಹೋಗು. ನಾವು ಬದುಕಿದ್ದು ನಿನಗೋಸ್ಕರ ಅಳಲಾರೆವು' ಎಂದರು ಆ ತಾಯಂದಿರು.

"ನೀವೇನೂ ಭಯಪಡಬೇಡಿ. ನಾನು ನಾಗಮಲ್ಲಿಗೆ ಬೀಜಗಳನ್ನು ತಂದು ಅಂತಃಪುರದಲ್ಲಿ ನೆಡುವೆನು. ನಾನು ಎಷ್ಟು ಸಾರಿ ಊಟ ಮಾಡುವೆನೋ ಅಷ್ಟು ಸಾರಿ ಅದಕ್ಕೆ ನೀರು ಹಾಕಿ. ನಾಗಮಲ್ಲಿಗೆ ಹಸುರಾಗಿರುವವರೆಗೂ ನಾನು ಕ್ಷೇಮವಾಗಿರುವೆನೆಂದು ತಿಳಿಯಿರಿ. ಅದು ಒಣಗಿಹೋದರೆ ನಾನು ತೀರಿಕೊಂಡೆನೆಂದು ತಿಳಿಯಿರಿ" ಎಂದು ಬಾಲಕನು ಅವರಿಗೆ ನಂಬಿಕೆ ಇತ್ತ. ಬಾಲಕನಿಗೆ ಊಟ ಮಾಡಿಸಿದರು. ಬುತ್ತಿ ಕಟ್ಟಿಕೊಟ್ಟರು. ತಂದೆಯ ಆಭರಣಗಳನ್ನು ತೊಡಿಸಿದರು. ಕೈಗೆ ಕಾಪು, ಕಾಲಿಗೆ ಕಡಗ, ಕೊರಳಿಗೆ ಚಂದ್ರಹಾರ, ರತ್ನಹಾರ, ಮುತ್ತು ಮಾಣಿಕ್ಯಗಳನ್ನೆಲ್ಲಾ ಧರಿಸಿದ. ತಾತಂದಿರ ಚಂದ್ರಾಯುಧವನ್ನು ಸೊಂಟಕ್ಕೆ ಬಿಗಿದುಕೊಂಡ. ರತ್ನಗಂಬಳಿ ಹೊದ್ದುಕೊಂಡು ಆರು ಜನ ತಾಯಂದಿರಿಗೂ ನಮಸ್ಕರಿಸಿ ಪ್ರಯಾಣ ಬೆಳೆಸಿದ.

(ಮುಂದುವರಿಯುವುದು)






ಒಂದು ಊರಿನಲ್ಲಿ ಬಡದಂಪತಿಗಳು ಇದ್ದರು. ಅವರಿಗೆ ಒಬ್ಬ ಮಗ, ಒಬ್ಬ ಮಗಳು. ತಂದೆ ಕೂಲಿನಾಲಿ ಮಾಡುತ್ತಿದ್ದ. ತಾಯಿ ಕೊಟ್ಟಕುಟ್ಟಿ ಹಿಡಿ ಕಾಳು ತರುತ್ತಿದ್ದಳು. ಮಗ ಕಾಡಿಗೆ ಹೋಗಿ ಉಡಗಳನ್ನು ಬೇಟೆಯಾಡಿ ತಂದು ಪಟ್ಟಣದಲ್ಲಿ ಮಾರುತ್ತಿದ್ದ. ಹುಡುಗಿ ಮನೆಯಲ್ಲಿದ್ದು ಮೂವರು ತಂದಿದ್ದನ್ನು ಅಡಿಗೆ ಮಾಡಿ ಸಿದ್ಧ ಮಾಡಿ ಇಡುತ್ತಿದ್ದಳು.

ಆ ಕುಟುಂಬದಲ್ಲಿ ಹುಡುಗಿ ಬಲು ಚುರುಕು, ಚತುರೆ, ಯುಕ್ತಿವಂತೆ. ಒಂದು ದಿನ ತಂದೆಯ ಹತ್ತಿರ ಹೋಗಿ 'ಅಪ್ಪಾ, ಹೀಗೆ ನೀವು ಎಷ್ಟು ದಿನ ಕಷ್ಟಪಟ್ಟರೂ ಹೊಟ್ಟೆ ತುಂಬುವಂತಿಲ್ಲ. ಶೆಟ್ಟರ ಹತ್ತಿರ ಹೋಗಿ ನೂರು ರೂಪಾಯಿ ಸಾಲ ತಂದು ವ್ಯಾಪಾರ ಮಾಡಿರಿ. ದೇವರ ದಯೆಯಿಂದ ಲಾಭ ಬಂದರೆ ಒಂದು ನಿಮಿಷದಲ್ಲಿ ಸಾಲ ತೀರಿಸಬಹುದು' ಎಂಬುದಾಗಿ ಸಲಹೆ ಕೊಟ್ಟಳು.

ಅದಕ್ಕೆ ಆತನು 'ಮಗೂ, ನಿನ್ನ ಸಲಹೆ ಸೂಕ್ತವಾಗಿದೆ. ಆದರೆ ಸಾಲ ಮಾಡಿದರೆ ಅದನ್ನು ತೀರಿಸುವ ಮಾರ್ಗ ಯಾವುದು? ಶೆಟ್ಟಿ ಸಾಮಾನ್ಯನಲ್ಲ. ಈಗ ಒಳ್ಳೆ ಮಾತೇ ನೋ ಆಡುತ್ತಾನೆ. ನಾಳೆ ವಾಯಿದೆ ತೀರಿದ ಕೂಡಲೇ ಆಡಬಾರದ ಮಾತುಗಳನ್ನು ಆಡುವನು, ಜಗಳಕ್ಕೆ ಎಳೆಯುವನು. ಈ ಕಾರ್ಕೋಟಕನ ಬಾಧೆ ನಾವು ತಾಳಲಾರೆವು. ಆದರೂ ಸಾಲಮಾಡಿ ಉಣ್ಣುವುದು ಒಳ್ಳೆಯದೇ? ಮಗು' ಎಂದ.

'ಅಪ್ಪಾ, ನೀವೇನೂ ಭಯಪಡಬೇಡಿ ಒಂದು ತಿಂಗಳ ವಾಯಿದೆಗೆ ನೂರು ರೂಪಾಯಿ ಶೆಟ್ಟರ ಹತ್ತಿರ ಸಾಲಮಾಡಿ, ಪಟ್ಟಣಕ್ಕೆ ಹೋಗಿ ಸರಕು ತೆಗೆದುಕೊಂಡು ಬನ್ನಿ. ನಾನು ಎಲ್ಲಾ ಇಲ್ಲಿ ನೋಡಿಕೊಳ್ಳುವೆನು!' ಎಂದು ಧೈರ್ಯ ಹೇಳಿದಳು ಹುಡುಗಿ.

ಮಗಳು ಇಷ್ಟು ಧೈರ್ಯದಿಂದ ಏಕೆ ಹೇಳುತ್ತಿರುವಳೋ, ನೋಡೋಣವೆಂದು ಆತನು ಶೆಟ್ಟಿಯ ಹತ್ತಿರಕ್ಕೆ ಹೋಗಿ ನೂರು

'ಲಕ್ಷ್ಮಿ ಸರಸ್ವತಿ,' ಮೈಸೂರು.



ರೂಪಾಯಿ ಸಾಲ ಪಡೆದ. ಸರಕು ತರಲು ಪಟ್ಟಣಕ್ಕೆ ಹೋದ. ಆದರೆ ವಾಯಿದೆಗೆ ಮೊದಲು ಆತ ಹಿಂದಿರುಗಲು ಆಗಲಿಲ್ಲ.

ಸರಿಯಾಗಿ ಮೂವತ್ತು ದಿನಗಳು ಪೂರ್ತಿ ಯಾದ ಕೂಡಲೇ ಶೆಟ್ಟಿ ಅವರ ಮನೆ ಮುಂದೆ ಪ್ರತ್ಯಕ್ಷನಾದ. ಶೆಟ್ಟಿ ಬರುವ ವೇಳೆಗೆ ಮನೆಯಲ್ಲಿ ಹುಡುಗಿಮಾತ್ರ ಇದ್ದಳು.

'ನಿಮ್ಮಪ್ಪ ಎಲ್ಲಿ? ಎಂದು ಕೇಳಿದ ಶೆಟ್ಟಿ. 'ಊರಿಗೆ ಹೋಗಿದ್ದಾರೆ' ಎಂದು ಹುಡುಗಿ ಹೇಳಿದಳು.

'ಯಾವಾಗ ಬರುತ್ತಾನೆ' ಎಂದ ಶೆಟ್ಟಿ. 'ಬಂದರೆ ಬರೋಲ್ಲ, ಬರದಿದ್ದರೆ ಬರುತ್ತಾರೆ' ಎಂದು ನಿಧಾನವಾಗಿ ಉತ್ತರ ಕೊಟ್ಟಳು.

ಈರೀತಿ ಜವಾಬು ಕೇಳಿ ಶೆಟ್ಟಿಗೆ ಕೋಪ ನೆತ್ತಿಗೆ ಏರಿತು.

'ಸರಿ ನಿಮ್ಮ ತಾಯಿ ಎಲ್ಲಿ?' ಕೋಪ ದಿಂದ ಕೇಳಿದ.

'ನಮ್ಮ ತಾಯಿ ಕರಡ ಮನೆಗೆ ಭತ್ತ ಕುಟ್ಟಲು ಹೋದಳು' ಎಂದಳು.

ಈಮಾತುಗಳು ಶೆಟ್ಟಿಗೆ ಅರ್ಥವಾಗಲಿಲ್ಲ. ಹುಡುಗಿ ತನ್ನನ್ನು ಹಾಸ್ಯಮಾಡುತ್ತಿರುವ ಳೆಂದು ಭಾವಿಸಿದ. 'ಸರಿ, ಸರಿ ನಿಮ್ಮ ಅಣ್ಣ ಏನಾದ?' ಎಂದು ಕೋಪದಿಂದ ಕಿರಿಚಿದ.

ಅದಕ್ಕೆ ಹುಡುಗಿ ನಗುತ್ತಾ 'ನಮ್ಮ ಅಣ್ಣ ಕಾಲಿಲ್ಲದ ಕುದುರೆ ಹತ್ತಿ, ಕೂದಲಿಲ್ಲದ ಪ್ರಾಣಿಯನ್ನು ಬೇಟೆ ಆಡಲು ಹೋದನು' ಎಂದಳು.

ಶೆಟ್ಟಿಗೆ ಈಸಾರಿ ಕೋಪ ತಡೆಯಲು ಆಗಲಿಲ್ಲ. 'ಈ ದರಿದ್ರರಿಗೆ ಇಷ್ಟೊಂದು ಸೊಕ್ಕೇ? ಎಂದುಕೊಂಡು ರಾಜನ ಹತ್ತಿರ ಹೋಗಿ ದೂರು ಕೊಟ್ಟ. ರಾಜರು ಆ ಹುಡುಗಿಯನ್ನುಕರೆಸಿ ವಿಚಾರಣೆಮಾಡಿದರು. ಅದಕ್ಕೆ ಆ ಹುಡುಗಿ 'ಮಹಾಪ್ರಭೂ! ನಾನು ಹೇಳಿದ ಮಾತುಗಳಲ್ಲಿ ಒಂದೂ ತಪ್ಪಿಲ್ಲ. ಶೆಟ್ಟರಿಗೆ ನನ್ನ ಮಾತುಗಳು ಅರ್ಥ ಆದ ವೋ, ಇಲ್ಲವೋ!' ಎಂದಳು.

'ಮತ್ತೆ ಹಾಗಿದ್ದರೆ ನಿನ್ನ ಉತ್ತರಗಳಿಗೆ ಅರ್ಥ ಹೇಳು' ಅಂದರು ರಾಜರು.

'ಮಹಾರಾಜ, ನಮ್ಮ ತಂದೆ ಹೋದ ಊರಿಗೂ, ನಮ್ಮ ಊರಿಗೂ ಮಧ್ಯೆ ಒಂದು ಸಣ್ಣ ನದಿ ಇದೆ. ಅದು ತಗ್ಗು ಪ್ರದೇಶ. ಆದ್ದರಿಂದ ಒಂದು ಹನಿ ಬಿದ್ದರೆ ನೀರು ತುಂಬಿ ಹರಿಯುತ್ತದೆ. ಒಂದು ವೇಳೆ ನಮ್ಮ ತಂದೆ ಹೊರಟ ಸಮಯಕ್ಕೆ ಮಳೆ ಬಂದರೆ ನದಿ ಪ್ರವಾಹ ಬಂದು ದಾಟಲು ಅಡಚಣೆಯಾಗುತ್ತದೆ. ಆದ್ದರಿಂದ 'ಬಂದರೆ ಬರೋಲ್ಲ, ಬರದಿದ್ದರೆ ಬರ್ತಾನೆ, ಎಂದೆ' ಎಂದು ಹೇಳಿ ನಗುಮುಖ ಮಾಡಿದಳು.

'ಕರಡ ಮನೆಯೇನು? ಭತ್ತ ಕುಟ್ಟುವುದೇನು?' ಎಂದು ರಾಜರು ಕೇಳಿದರು. ಅದಕ್ಕೆ 'ಕರಡ ಎಂಬ ಮನೆ ಹೆಸರಿನ ಧನವಂತರಿದ್ದಾರೆ. ಅವರ ಮನೆಯಲ್ಲಿ ಭತ್ತ ಕುಟ್ಟಲು ನಮ್ಮ ತಾಯಿ ಹೋದಳು.' ಎಂದು ಹೇಳಿದ ಈ ಮಾತು ಬಹುಶಃ ಅರ್ಥಮಾಡಿಕೊಂಡಿರಲಾರರು ಶೆಟ್ಟರು.' ಎಂದಳು.

'ಕಾಲಿಲ್ಲದ ಕುದುರೆ ಇದೆಯೆ? ಏನು ಅದರ ಅರ್ಥ' ಎಂದು ಕೇಳಿದರು ರಾಜರು. "ನಿಮ್ಮ ಅಣ್ಣ ಎಲ್ಲೀ' ಎಂದು ಕೇಳಿದರು ಶೆಟ್ಟರು. ನಮ್ಮ ಅಣ್ಣ ಚಿಕ್ಕಂದಿನಿಂದಲೂ, ಜೋಡು ಹಾಕಿಕೊಂಡು ಉಡಗಳ ಬೇಟೆಗೆ ಹೋಗುವುದು ವಾಡಿಕೆ. ಕಾಲಿಲ್ಲದ ಕುದುರೆ ಎಂದರೆ ಜೋಡು. ಉಡಕ್ಕೆ ಕೂದಲು ಇರುವುದಿಲ್ಲ, ಅಲ್ಲವೆ? ಆದ್ದರಿಂದ ಕೂದಲಿಲ್ಲದ ಪ್ರಾಣಿಯನ್ನು ಬೇಟೆಯಾಡಲು



ಹೋದ' ಎಂದು ಹೇಳಿದೆ. ಇದರಲ್ಲಿ ತಪ್ಪೇನೂ ಇಲ್ಲ'' ಎಂದಳು.

ಹುಡುಗಿಯ ತಿಳುವಳಿಕೆಗೆ ಯುಕ್ತಿಗೆ ರಾಜರು ಮೆಚ್ಚಿ, ಶೆಟ್ಟಿಗೆ ವೃಥಾ ದೂರು ತಂದದಕ್ಕೆ ನೂರು ರೂಪಾಯಿ ಜುಲ್ಮಾನೆ ವಿಧಿಸಿ, ಆ ಹಣವನ್ನು ಹುಡುಗಿಗೆ ಬಹುಮಾನಮಾಡಿದರು. ಮಹಾರಾಜರ ಸಾನ್ನಿಧ್ಯದಲ್ಲೇ ಅದೇ ನೂರು ರೂಪಾಯಿಗಳನ್ನು ಆಕೆ ಶೆಟ್ಟರಿಗೆ ಹಿಂದಕ್ಕೆ ಕೊಟ್ಟು, ಸಾಲ ತೀರಿಸಿದಳು.

ಪಟ್ಟಣಕ್ಕೆ ಹೋಗಿದ್ದ ತಂದೆ ಸರಕುಗಳೊಂದಿಗೆ ಮರುದಿನವೇ ಮನೆಗೆ ಬಂದರು. ತಮ್ಮ ಮಗಳ ಉಪಾಯವನ್ನು ಕೇಳಿದರು. ಬಹಳ ಸಂತೋಷಪಟ್ಟರು.




ಒಂದು ಊರಿನಲ್ಲಿ ವೀರಣ್ಣ ಎಂಬ ಕಳ್ಳ ನಿದ್ದ. ಒಂದುದಿನ ಅವನು ಒಂದು ಮನೆಗೆ ಕನ್ನ ಹಾಕಿ ಒಳಗೆ ಪ್ರವೇಶಿಸುವ ಸಮಯಕ್ಕೆ ಸರಿಯಾಗಿ ಒಂದು ನಾಗರ ಹಾವು ಅವನ ಪಕ್ಕದಲ್ಲೇ ಸರಸರನೆ ಹರಿದು ಹೋಯಿತು. ವೀರಣ್ಣ ಬೆಚ್ಚಿಬಿದ್ದ. ನಾಗರ ಹಾವಿನಕಡೆಯೇ ನೋಡುತ್ತಾ ನಿಂತುಬಿಟ್ಟ.

ಆ ನಾಗರ ಹಾವು ಒಂದು ಕೋಣೆಯ ಬಳಿಗೆ ಹೋಗಿ ಅಲ್ಲಿ ಇದ್ದ ನೀರಿನ ಪಾತ್ರೆಯಲ್ಲಿ ವಿಷವನ್ನು ಕಕ್ಕಿ ಬಂದ ದಾರಿ ಹಿಡಿಯಿತು. ವೀರಣ್ಣ ಅದನ್ನು ನೋಡಿ ತನ್ನ ಹತ್ತಿರವಿದ್ದ ಕೋಲಿನಿಂದ ಹೊಡೆಯಲು ಹೋದ. ಆದರೆ ಅದು ಒಂದು ಸುಂದರ ಸ್ತ್ರೀ ರೂಪವನ್ನು ತಾಳಿತು. ಆಕೆ ಹೇಳಿದಳು 'ನೀನು ಮಾತನಾಡದೆ ನನ್ನನ್ನು ಹಿಂಬಾಲಿಸು' ಎಂದು. ವೀರಣ್ಣ ಆಶ್ಚರ್ಯದಿಂದ ಮರು ಮಾತನಾಡದೆ ಆಕೆಯನ್ನು ಹಿಂಬಾಲಿಸಿದ.

ಆಕೆ ಊರ ಹೊರಗೆ ಬಂದಳು. ಅಲ್ಲಿ ಒಂದು ಭಾವಿಯ ಮೇಲೆ ಇದ್ದ ತೊಲೆಯನ್ನು ಮುರಿದು, ಯಥಾಪ್ರಕಾರ ಮೊದಲಿದ್ದಂತೆ ಅದರ ಮಾಮೂಲು ಸ್ಥಳದಲ್ಲಿ ಇರಿಸಿದಳು. ವೀರಣ್ಣನ ಕುತೂಹಲ ಕೆರಳಿತು. ತಡೆಯಲಾರದೆ ಕೇಳಿದ. "ಏಕಮ್ಮಾ, ಆತೊಲೆಯನ್ನು ಅನವಶ್ಯಕವಾಗಿ ಮುರಿದು, ಏನೂ ಅರಿಯದವಳಂತೆ ಯಥಾಸ್ಥಾನದಲ್ಲಿ ಇಟ್ಟೆ? ಯಾರು ನೀನು?" ಎಂದು-

ಅದಕ್ಕೆ ಆಕೆ "ನನ್ನ ಹೆಸರು ಅಕಾಲ ಮೃತ್ಯು. ಬ್ರಹ್ಮನು ಕೊಟ್ಟ ಆಯುಸ್ಸು ಪೂರ್ತಿಯಾಗುವ ಮೊದಲೇ ಕೆಲವರ ಪ್ರಾಣ ತೆಗೆಯುವನು. ಅದನ್ನು ಪೂರೈಸುವುದೇ ನನ್ನ ಕೆಲಸ" ಎಂದಳು. "ಬದುಕಿರುವವರ ಪ್ರಾಣ ತೆಗೆಯುವುದರಲ್ಲಿ ಅರ್ಥವಿದೆ. ಆದರೆ ಪ್ರಾಣವಿಲ್ಲದ ಈ ತೊಲೆಯನ್ನು ಏಕೆ ಮುರಿದೆ" ಎಂದು ವೀರಣ್ಣ ಮತ್ತೆ ಕೇಳಿದ. "ಆಸಂಗತಿ ಈಗ ಹೇಳಲಾರೆ, ನಾಳೆ ಬೆಳಗಿನವರೆವಿಗೂ ಇಲ್ಲಿಯೇ ಇದ್ದು ಏನು ನಡೆಯುವುದೋ ನೋಡು. ನಿನಗೇ ತಿಳಿಯುವುದು" ಎಂದು ಹೇಳಿದಳು ಆಕೆ. "ಹಾಗಾದರೆ ನನ್ನ

'ಸಂಪತ್ಕುಮಾರ.'

ಮರಣವೂ ನಿನ್ನ ಕೈಯಲ್ಲಿಯೇ ಇರುವುದೋ? ಇಲ್ಲ ನಾನು ಬ್ರಹ್ಮ ಕೊಟ್ಟ ಆಯಸ್ಸು ಪೂರ್ತಿಯಾಗುವವರೆವಿಗೂ ಜೀವಿಸುತ್ತೇನೋ, ಹೇಳು" ಎಂದು ದುಗುಡದಿಂದ ಕೇಳಿದ ವೀರಣ್ಣ. ಅದಕ್ಕೆ ಉತ್ತರವಿತ್ತಳು ಆಕೆ. "ಅದು ನನ್ನ ಕೈಯಲ್ಲೇ ಇರುವುದು. ಆದರೂ ನೀನು ಕೇಳಿದ್ದರಿಂದ ಹೇಳುತ್ತೇನೆ. ಕೆಲದಿನಗಳಲ್ಲಿ ಮಹಾರಾಜರ ಸ್ವತ್ತನ್ನು ಅಪಹರಿಸಿದ ತಪ್ಪು ನಿನ್ನಮೇಲೆ ಬೀಳುವುದು. ಆಗ ನಾನು ನಿನ್ನ ಪ್ರಾಣ ತೆಗೆಯುವೆನು. ಇದು ನನ್ನ ಕರ್ತವ್ಯ. ತಪ್ಪಲಾರದು. ಈವಿಷಯ ನೀನು ಏನಾದರೂ ಬಯಲು ಮಾಡಿದೆಯೋ, ತಕ್ಷಣವೇ ನಿನ್ನ ತಲೆ ನೂರು ಹೋಳಾಗುವುದು. ಜಾಗ್ರತೆ" ಎಂದು ಎಚ್ಚರಿಸಿ ಅದೃಶ್ಯಳಾದಳು.

ಈಮಾತುಗಳನ್ನು ಕೇಳಿ ವೀರಣ್ಣ ಬಹಳ ಖಿನ್ನನಾದ. 'ಕಳ್ಳತನದಿಂದಲ್ಲವೇ ಪ್ರಾಣ ಹೋಗುವುದು. ಆದ್ದರಿಂದ ಈ ಕ್ಷಣದಿಂದಲೇ ಆ ಕಸಬು ಬಿಡುವೆನು.' ಎಂದು ದೇವರ ಸಾಕ್ಷಿಯಾಗಿ ಪ್ರಮಾಣ ಮಾಡಿದ.

ಬಾವಿಯ ಹತ್ತಿರ ಏನು ನಡೆಯುವುದೋ ನೋಡಲು ಅಕಾಲಮೃತ್ಯು ಹೇಳಿದ ಪ್ರಕಾರ ಅಲ್ಲಿಯೇ ಕುಳಿತಿದ್ದ. ಬೆಳಗಾದ ಕೂಡಲೇ ಆ ಊರಿನ ಹೆಂಗಸರು ನೀರಿಗಾಗಿ ಕೊಡಗಳನ್ನು ಹೊತ್ತುಕೊಂಡು ಬರುತ್ತಿದ್ದರು. ವೀರಣ್ಣ ಅವರಿಗೆ 'ತಾಯಿ, ತೊಲೆ ಮುರಿದು



ಹೋಗಿದೆ. ನೀರು ಸೇದುವಾಗ ಜಾಗರೂಕರಾಗಿರಿ'ಎಂದು ಹೇಳಬೇಕೆಂದಿದ್ದ.

ಅಷ್ಟರಲ್ಲಿ ಹಿಂದಿನಿಂದ 'ಅಯ್ಯೋ, ರಕ್ಷಿಸಿ, ರಕ್ಷಿಸಿ' ಎಂಬ ಸ್ತ್ರೀ ಕಂಠ ಕೇಳಿಸಿತು. ಯಾರೋ ಸ್ತ್ರೀ ಆಪತ್ತಿನಲ್ಲಿರುವಳೆಂದು, ಆಕೆಯನ್ನು ಕಾಪಾಡುವ ಸಲುವಾಗಿ ಆ ಧ್ವನಿ ಬಂದ ಕಡೆಗೆ ಓಡಿದ ವೀರಣ್ಣ. ಎಷ್ಟು ದೂರ ಸಾಗಿದರೂ ಯಾರೂ ಕಾಣಿಸಲಿಲ್ಲ. ಮತ್ತೆ ಆ ಕೂಗು ಕೇಳಿಸಲಿಲ್ಲ. ಮೃತ್ಯು ದೇವತೆ ಹೇಳಿದ ಮಾತುಗಳು ಮತ್ತೆ ಜ್ಞಾಪಕಕ್ಕೆ ಬಂದುವು. ಆತ ಬಾವಿ ಕಡೆಗೆ ಓಡಿ ಬಂದ. ಅಲ್ಲಿಗೆ ಆತನು ಬರುವ ವೇಳೆಗೆ ಸರಿಯಾಗಿ ಯಾರೋ ಒಬ್ಬಾಕೆ ಬಾವಿಯಲ್ಲಿ ಅಕಸ್ಮಾತ್ ಬಿದ್ದು ಹೊರಗೆ ತೆಗೆಯುವಷ್ಟ



ರಲ್ಲಿ ಸತ್ತು ಹೋದುದು ಕಾಣಿಸಿತು. ಇದೆಲ್ಲ ವನ್ನೂ ನೋಡಿ ವೀರಣ್ಣನ ಯೋಚನೆ ಮತ್ತಷ್ಟು ಹೆಚ್ಚಾಯಿತು.

*　　*　　*

ವೀರಣ್ಣ ಪ್ರಮಾಣ ಮಾಡಿ, ಕಳ್ಳತನ ಬಿಟ್ಟ ತರುವಾಯ ಒಬ್ಬ ರೈತನ ಹತ್ತಿರ ಕೆಲ ಸಕ್ಕೆ ಸೇರಿದ. ಮರ್ಯಾದೆಯಾಗಿ ಜೀವನ ಮಾಡುತ್ತಿದ್ದ. ನಂಬಿಕೆಯಿಂದ ನಡೆಯು ತ್ತಿದ್ದನಾದ್ದರಿಂದ ರೈತನಿಗೆ ಆತನ ಮೇಲೆ ನಂಬಿಕೆ, ಅಭಿಮಾನಗಳು ಉಂಟಾದುವು. ವೀರಣ್ಣನಿಗೆ ಮದುವೆ ಮಾಡಿಸಿದ. ಅವನು ಒಬ್ಬ ಸಂಸಾರಿಯಾದ.

ಈಗ ವೀರಣ್ಣನದು ಸುಖಜೀವನವಾಗಿ ದ್ದಿತು. ಆತನ ಹೆಂಡತಿ ಗರ್ಭಿಣಿಯಾಗಿ ದ್ದಳು. ಹೆರಿಗೆಗೆ ಆಕೆಯನ್ನು ತವರುಮನೆಗೆ ಕರೆದುಕೊಂಡು ಹೋಗುವ ಉದ್ದೇಶದಿಂದ ದಣಿಯ ಹತ್ತಿರ ರಜ ಪಡೆದು ವೀರಣ್ಣನು ಹೊರಟ.

ಪ್ರಯಾಣ ಮಾಡುವಾಗ ದಾರಿಯಲ್ಲೇ ಒಂದು ಊರಿನಲ್ಲಿ ಆತನ ಹೆಂಡತಿ ಗಂಡು ಮಗುವನ್ನು ಪ್ರಸವಿಸಿದಳು.

ದೇವರ ದಯೆಯಿಂದ ಎಲ್ಲವೂ ಸರಿಯಾಗಿ ನಡೆಯಿತು. "ನೀವು ಯಾವುದಾದರೂ ಹತ್ತಿರ ಇರುವ ಊರಿಗೆ ಹೋಗಿ ಬಾಣಂತಿ ಖಾರದ ದಿನಸುಗಳನ್ನು ತೆಗೆದುಕೊಂಡು ಬನ್ನಿ" ಎಂದು ಆಕೆ ಗಂಡನಿಗೆ ಹೇಳಿದಳು. ಅದನ್ನು ತರಲು ವೀರಣ್ಣ ಊರಿನ ಕಡೆ ಹೊರಟ.

*　　*　　*

ಇದು ಹೀಗೆ ಇರುವಲ್ಲಿ, ಆ ಊರು ರಾಜನ ಕೋಟೆಯಲ್ಲಿ ಜೂಜಿನ ಕೋಳಿ ಗಳು ಎರಡು ಕಾಣಿಸಲಿಲ್ಲ. ಆ ಕೋಳಿ ಹುಂಜಗಳೆಂದರೆ ರಾಜನಿಗೆ ತುಂಬ ಪ್ರೀತಿ. ಆದುದರಿಂದ ಅದನ್ನು ಹೇಗಾದರೂ ಕಂಡು ಹಿಡಿಯಲು ಭಟರಿಗೆ ಆಜ್ಞೆ ಆಯಿತು. ನಾಲ್ಕು ದಿಕ್ಕಿಗೂ ಜನರನ್ನು ಅಟ್ಟಿದರು. ಎರಡು ದಿನಗಳಲ್ಲಿ ಅದನ್ನು ತರದಿದ್ದ ಪಕ್ಷದಲ್ಲಿ ಅವರ ತಲೆ ತೆಗೆಯುವೆವೆಂದರು.

ಎಷ್ಟು ಹುಡುಕಿದರೂ ಹುಂಜಗಳು ಕಾಣಿಸಲಿಲ್ಲ. ಆಗ ರಾಜಭಟರೆಲ್ಲಾ ಸೇರಿ ಒಂದು ಯೋಚನೆ ಮಾಡಿದರು. ಮಸಾಲೇ

ಸಾಮಾನು ಬೇಕೆಂದು ಯಾರು ಬಂದು ಕೇಳಿದರೂ ಅವರನ್ನು ಕೂಡಲೇ ಹಿಡಿದು ಕೊಡಬೇಕೆಂದು ಎಲ್ಲ ಅಂಗಡಿಯವರಿಗೂ ತಿಳಿಸಿದರು. ಹುಂಜಗಳನ್ನು ಕದ್ದವರು ಅವನ್ನು ಬೇಯಿಸಿಕೊಂಡು ತಾನೇ ತಿನ್ನು ವರು. ಅದಕ್ಕೆ ಮಸಾಲೆ ಸಾಮಾನು ಅಗತ್ಯ ವಲ್ಲವೆ? ಇದು ರಾಜಭಟರ ಉದ್ದೇಶ.

ನಮ್ಮ ವೀರಣ್ಣ ಆ ಊರಿಗೆ ಹೋಗಿ ಒಂದು ಅಂಗಡಿಯಲ್ಲಿ 'ಮಸಾಲೆ ಸಾಮಾನು ಗಳು ಇವೆಯೇ?' ಎಂದು ಕೇಳಿದ. ಪಾಪ. ಹೆಂಡತಿ ಹೇಳಿದ ಹಾಗೆ ಬಾಣಂತಿ ಖಾರದ ದಿನಸು ಎಂದು ಕೇಳಲು ಮರೆತುಬಿಟ್ಟ.

'ಇವೆ. ಆದರೆ ಅದು ಯಾಕೆ ಎಂದು ಹೇಳಿದ ಹೊರತು ಕೊಡಲಾರೆ" ಎಂದ ಅಂಗಡಿಯವ.

"ಇದೇನು ಸೋಜಿಗ! ಈಗ ತಾನೆ ನನ್ನ ಹೆಂಡತಿ ಹೆತ್ತಿರುವಳು. ಆಕೆ ಏನೋ ದಿನಸು ತರುವಂತೆ ಹೇಳಿದಳು. ಹೆಸರು ಜ್ಞಾಪಕಕ್ಕೆ ಬರದು. ಇವುಗಳನ್ನಾದರೂ ತೆಗೆದುಕೊಂಡು ಹೋದರೆ ಸ್ವಲ್ಪ ಸಹಾಯ ವಾಗಬಹುದೆಂದು ಕೇಳಿದೆ' ಎಂದ ವೀರಣ್ಣ. ಅಂಗಡಿಯವ ವೀರಣ್ಣನನ್ನು ಹಿಡಿದು ರಾಜ ಭಟರಿಗೆ ಒಪ್ಪಿಸಿದ. ರಾಜಭಟರು ಆತನನ್ನು ಹಿಡಿದುಕೊಂಡು ನಿನ್ನ ಹೆಂಡತಿ ಎಲ್ಲಿ ಪ್ರಸ



ವಿಸಿದಳೋ ತೋರಿಸು. ನಿಜವಿದ್ದಪಕ್ಷದಲ್ಲಿ ನಿನ್ನನ್ನು ಬಿಡುವೆವು. ಸುಳ್ಳಾದರೆ ನಿನ್ನನ್ನು ಬಂಧಿಸುತ್ತೇವೆ' ಎಂದು ವೀರಣ್ಣನನ್ನು ಸಂ ಗಡ ಕರೆದುಕೊಂಡು ಹೊರಟರು.

ಆಕೆಯನ್ನು ಬಿಟ್ಟಿದ್ದ ಸ್ಥಳಕ್ಕೆ ಬಂದು ನೋಡಿದರೆ ಅಲ್ಲಿ ವೀರಣ್ಣನ ಹೆಂಡತಿಯೂ ಇಲ್ಲ. ಮಗನೂ ಇಲ್ಲ. ಅದರ ಸ್ಥಳದಲ್ಲಿ ಒಲೆಯಮೇಲೆ ಒಂದು ಮಡಕೆಯಲ್ಲಿ ಮಾಂಸ ಕುತಕುತನೆಂದು ಕುದಿಯುತಿತ್ತು. ಅಲ್ಲಿಯೇ ರೆಕ್ಕೆ ಪುಕ್ಕಗಳೆಲ್ಲಾ ಕಾಣಿಸಿದವು. ಇನ್ನು ಸಂದೇಹವೇನು?

ಭಟರು ವೀರಣ್ಣನ ಕೈಗೆ ಬೇಡಿಗಳನ್ನು ಹಾಕಿ ರಾಜನ ಮುಂದೆ ತಂದು ನಿಲ್ಲಿಸಿದರು.

'ಮಹಾ ಪ್ರಭೂ ಇವನು ಹುಂಜಗಳನ್ನು ಅಡಿಗೆ ಮಾಡುತ್ತಿದ್ದುದನ್ನು ನಮ್ಮ ಕಣ್ಣಾರೆ ನೋಡಿ ಹಿಡಿದಿರುವೆವು.' ಎಂದು ಹೇಳಿದರು. ರಾಜನು 'ಈ ದುರ್ಮಾರ್ಗನನ್ನು ಆನೆಯ ಕಾಲಿನಿಂದ ತುಳಿಸಿ ಸಾಯಿಸಿ' ಎಂದು ಆಜ್ಞೆ ಮಾಡಿದ.

ವೀರಣ್ಣನನ್ನು ಕರೆದುಕೊಂಡು ಹೋಗುತ್ತಿರುವಷ್ಟರಲ್ಲಿ ಮತ್ತೊಂದು ಕಡೆ ಹೋಗಿದ್ದ ಭಟರು ಹುಂಜಗಳು ಸಿಕ್ಕಿದವೆಂದು ಉತ್ಸಾಹದಿಂದ ರಾಜನಿಗೆ ತಂದು ತೋರಿಸಿದರು. ರಾಜನಿಗೆ ಸಂತೋಷಾಶ್ಚರ್ಯಗಳು ಒಮ್ಮೆಲೇ ಆಯಿತು. ವೀರಣ್ಣನನ್ನು ಕೊಲ್ಲದೆ ದರ್ಬಾರಿಗೆ ಕರೆತರುವಂತೆ ರಾಜ ಆಜ್ಞೆ ಮಾಡಿದ. ಇನ್ನೇನು ಕೊಲ್ಲೋಣವೆಂದು ಆನೆಯಕೆಳಗೆ ಮಲಗಿಸಿದ್ದ ವೀರಣ್ಣನನ್ನು ಎಬ್ಬಿಸಿ, ಮತ್ತೆ ದರ್ಬಾರಿಗೆ ಕರೆತಂದರು.

ರಾಜ ಆಗ ದರ್ಬಾರು ನಡಿಸಿ, ಪಂಡಿತರನ್ನು ಕರೆಸಿ ನಿರಪರಾಧಿಗೆ ಮರಣದಂಡನೆ ವಿಧಿಸಿದುದಕ್ಕೆ ಪರಿಹಾರವೇನು?" ಎಂದು ಕೇಳಿದ. ಅದಕ್ಕೆ ಪಂಡಿತರು ವೀರಣ್ಣನು ಹೊರುವಷ್ಟು ದೊಡ್ಡ ಬಂಗಾರದ ಆನೆಯನ್ನು ಬಹುಮಾನವಾಗಿ ಕೊಡಬೇಕೆಂದು ಸಲಹೆ ಕೊಟ್ಟರು.

ಆಪ್ರಕಾರ ಬಂಗಾರದ ಆನೆಯನ್ನು ಮಾಡಿಸಿ, ವೀರಣ್ಣನ ತಲೆಯಮೇಲೆ ಇಡುವಲ್ಲಿ ಅದರ ಭಾರ ತಡೆಯಲಾರದೆ 'ಅಬ್ಬಾ ಅಕಾಲಮೃತ್ಯುವೇ! ಇದೆಲ್ಲವೂ ನಿನ್ನ ಕೆಲಸ. ಏನೇನು ವಿಚಿತ್ರ ಮಾಡಿದೆ, ದೇವಿ' ಎಂದು ಹೇಳುತ್ತಾ ಮೂಗಿನಿಂದ ರಕ್ತ ಕಾರಿಕೊಂಡು ವೀರಣ್ಣ ಪ್ರಾಣಬಿಟ್ಟ.

ಕೊನೆಗೆ ವೀರಣ್ಣನು ನುಡಿದ ಮಾತುಗಳಲ್ಲಿಯ ಸತ್ಯಾಸತ್ಯಗಳನ್ನು ತಿಳಿದು ರಾಜನು ಆಶ್ಚರ್ಯ ಹೊಂದಿದ. ಆದರೆ ಈಗ ಯಾರೇನು ಮಾಡಬಲ್ಲರು ? ಆತನ ಜ್ಞಾಪಕಾರ್ಥವಾಗಿ ಪ್ರತ್ಯೇಕವಾಗಿ ಒಂದು ಊರನ್ನು ಕಟ್ಟಿಸಿ ರಾಜನು ಅದಕ್ಕೆ 'ವೀರನಗರ' ಎಂದು ಹೆಸರಿಟ್ಟ.






ಪೂರ್ವಕಾಲದಲ್ಲಿ ಒಬ್ಬ ಸಿಪಾಯಿ ಯುದ್ಧಾನಂತರ ತನ್ನ ಮನೆಗೆ ಹಿಂತಿರುಗುತ್ತಿದ್ದ. ದಾರಿಯಲ್ಲಿ ಅವನಿಗೆ ಒಂದು ಭೂತ ಮುದುಕಿಯ ರೂಪದಲ್ಲಿ ಎದುರಾಗಿ "ಏನಯ್ಯಾ, ಸಿಪಾಯಿ! ನಿನ್ನ ವೇಷವನ್ನು ನೋಡಿದರೆ ನೀನೊಬ್ಬ ಮಹಾ ಧೈರ್ಯಶಾಲಿಯಂತೆ ಕಾಣಿಸುವೆ. ನಿನಗೆ ಬೇಕಾದಷ್ಟು ಹಣ ದೊರಕುವ ಉಪಾಯ ಹೇಳುತ್ತೇನೆ. ನಾನು ಹೇಳಿದಂತೆ ಮಾಡುವೆಯಾ?" ಎಂದಿತು.

"ಆಗಲಿ. ನನಗೆ ಬೇಕಾದ್ದೂ ಅದೇ. ಉಪಾಯ ಹೇಳು." ಅಂತ ಕೇಳಿದ ಸಿಪಾಯಿ. "ಅದೋ, ಆ ದೊಡ್ಡ ಮರ ನೋಡು. ಅದರ ಒಳಗೆಲ್ಲಾ ಟೊಳ್ಳು. ನೀನು ಮರ ಹತ್ತಿ ಅದರೊಳಕ್ಕೆ ಇಳಿ. ನಿನ್ನ ಸೊಂಟಕ್ಕೆ ಒಂದು ಹಗ್ಗವನ್ನು ಕಟ್ಟುವೆನು. ನೀನು ಒಳಗಿಂದ ಯಾವಾಗ ಕರೆದರೆ ಆಗ ಹಗ್ಗವನ್ನು ಎಳೆಯುವೆನು. ನೀನು ಹೊರಕ್ಕೆ ಬಂದುಬಿಡಬಹುದು" ಎಂದಳು ಮುದುಕಿ.

'ಸರಿ' ಎಂದ ಸಿಪಾಯಿ.

ಆಗ ಮರದೊಳಗೆ ಇಳಿದ ತರುವಾಯ ಏನು ಮಾಡಬೇಕೋ ಅದನ್ನು ಮುದುಕಿ ಹೀಗೆ ಹೇಳಿದಳು. "ಕೆಳಕ್ಕೆ ಇಳಿದ ಕೂಡಲೇ ಒಂದು ದೊಡ್ಡ ಅಂಗಳದಲ್ಲಿ ಸಾಲಾಗಿ ಮೂರು ಕೋಣೆಗಳು ಕಾಣಿಸುವುವು. ಅಂಗಳದಲ್ಲಿ ಸಾವಿರ ದೀಪಗಳು ಉರಿಯುತ್ತಿರುವುವು. ಮೊದಲನೆ ಕೋಣೆ ತೆರೆದ ತಕ್ಷಣ ಮಧ್ಯದಲ್ಲಿ ಒಂದು ದೊಡ್ಡ ಪೆಟ್ಟಿಗೆ. ಅದರ ಮೇಲೆ ಒಂದು ಭಯಂಕರವಾದ ನಾಯಿ ಕಾಣಿಸುವುದು. ಈ ನನ್ನ ನೀಲಿ ರತ್ನಗಂಬಳಿ ತೆಗೆದುಕೊ. ಇದನ್ನು ನೆಲದ ಮೇಲೆ ಹಾಸಿ ನಾಯಿಯನ್ನು ಎತ್ತಿ ಅದರ ಮೇಲೆ ಮಲಗಿಸಿದರೆ ಅದು ನಿನ್ನನ್ನು ಏನೂ ಮಾಡುವುದಿಲ್ಲ. ಆಗ ತಿಜೋರಿಯಲ್ಲಿರುವ ತಾಮ್ರದ ನಾಣ್ಯಗಳನ್ನು ನಿನ್ನ ಇಷ್ಟ ಬಂದಷ್ಟು ತೆಗೆದುಕೊಳ್ಳಬಹುದು.

ಒಂದು ವೇಳೆ ನಿನಗೆ ತಾಮ್ರದ ನಾಣ್ಯ ಬೇಡವಾದರೆ ಎರಡನೇ ಕೋಣೆಗೆ ಹೋಗು. ಅಲ್ಲಿ ಪೆಟ್ಟಿಗೆಯ ತುಂಬ ಬೆಳ್ಳಿಯ ನಾಣ್ಯಗಳು; ಅದರ ಮೇಲೆ ಮತ್ತೂ ಭಯಂಕರ

ಶ್ರೀ ಎಚ್. ಎಸ್. ಕೃಷ್ಣ.



ವಾದ ನಾಯಿ ಕಾಣಿಸುವುದು. ನಾಯಿಯನ್ನು ರತ್ನಗಂಬಳಿ ಮೇಲೆ ಮಲಗಿಸಿ ನೀನು ಹೊರಲಾಗುವಷ್ಟು ನಾಣ್ಯಗಳನ್ನು ತೆಗೆದುಕೊಳ್ಳಬಹುದು.

ತಾಮ್ರ ಬೇಡ, ಬೆಳ್ಳಿ ಬೇಡ. ಬಂಗಾರದ ಮೇಲೆ ಆಸೆಯಾಯಿತು. ಆಗ ಮೂರನೇ ಕೊಠಡಿಗೆ ಹೋಗು. ಆ ಕೋಣೆಯ ಪೆಟ್ಟಿಗೆಯ ಮೇಲೆ ಮತ್ತಷ್ಟು ಭಯಂಕರವಾದ ನಾಯಿ ಇರುವುದು. ಅದನ್ನು ರತ್ನಗಂಬಳಿಯಮೇಲೆ ಮಲಗಿಸಿ ಬೇಕಾದಷ್ಟು ಚಿನ್ನದ ನಾಣ್ಯಗಳನ್ನು ಪಡೆ." ಎಂದು ಮುದುಕಿ ರಹಸ್ಯವನ್ನು ಹೇಳಿಕೊಟ್ಟಳು.

ಆಗ ಸಿಪಾಯಿ "ದೊಡ್ಡಮ್ಮಾ, ನೀನು ಹೇಳಿದ್ದೆಲ್ಲವೂ ಚೆನ್ನಾಗಿದೆ. ಆದರೆ ಯಾವ ಪ್ರತ್ಯುಪಕಾರವನ್ನೂ ಪಡೆಯದೆ ಇಂತಹ ರಹಸ್ಯ ಯಾರೂ ಹೇಳೊಲ್ಲ. ತಂದ ಹಣದಲ್ಲಿ ನಿನಗೆಷ್ಟು ಹಣ ಬೇಕೋ ಈಗಲೇ ಹೇಳಿಬಿಡು; ತರುವಾಯ ಜಗಳ ಬೇಡ." ಎಂದ.

"ನೀನು ಕಷ್ಟಪಟ್ಟು ತರುವ ಹಣದಲ್ಲಿ ನನಗೊಂದು ಚಿಕ್ಕಾಸಾದರೂ ಬೇಡ. ಆದರೆ ನೀನು ಬರುವಾಗ ಅಂಗಳದಲ್ಲಿ ಕಾಣಿಸುವ ಚೆಕುಮುಕಿ ಕಲ್ಲು ಮಾತ್ರ ನನಗೆ ತಂದುಕೊಡು. ನಮ್ಮಜ್ಜಿ ಬದುಕಿದ್ದಾಗ ಅಲ್ಲಿಗೆ ಹೋಗಿ ಅದನ್ನು ಮರೆತುಬಿಟ್ಟು ಬಂದಳು. ಅದನ್ನು ತಂದುಕೊಟ್ಟೆ ಎಂದರೆ ಆಕೆಯ ಜ್ಞಾಪಕಾರ್ಥವಾಗಿ ನಾವು ಭದ್ರವಾಗಿ ಇಟ್ಟುಕೊಳ್ಳುವೆವು" ಎಂದು ಮುದುಕಿ ಹೇಳಿದಳು. ಸಿಪಾಯಿ ಒಪ್ಪಿಕೊಂಡ.

ಸಿಪಾಯಿಯ ಸೊಂಟಕ್ಕೆ ಮುದುಕಿ ಹಗ್ಗ ಬಿಗಿದಳು. ನೀಲಿ ರತ್ನಗಂಬಳಿ ಅವನ ಕೈಗೆ ಕೊಟ್ಟಳು.

ಆತನು ಮರದ ಪೊಟರೆಯಲ್ಲಿ ಇಳಿದು ಅಂಗಳದ ಮೊದಲ ಕೋಣೆ ತೆಗೆದ. ಪೆಟ್ಟಿಗೆಯಮೇಲೆ ಕುಳಿತಿದ್ದ ನಾಯಿ ಚಂಡಿನ ಗಾತ್ರದಷ್ಟು ಕಣ್ಣುಗಳಿಂದ ಸಿಪಾಯಿಯ ಕಡೆ ಭಯಂಕರವಾಗಿ ನೋಡಿತು. ಆತನು ಹೆದರಿಕೊಳ್ಳದೆ ನಾಯಿಯನ್ನು ಎತ್ತಿ ರತ್ನಗಂಬಳಿಯ ಮೇಲಿಟ್ಟು 'ಎಲೆ ಶುನಕವೇ, ಹಾಯಾಗಿ ಇದರ ಮೇಲೆ ಮಲಗು.' ಎಂದ.

ಆಶೀರ್ವಿಧೇಯಿತೆಯಿಂದ ಆ ನಾಯಿ ಮಲಗಿತು. ಆಗ ಸಿಪಾಯಿ ಪೆಟ್ಟಿಗೆ ತೆಗೆದು ತನ್ನ ಕಿಸೆಗಳು ತುಂಬುವಷ್ಟು ತಾಮ್ರದ ನಾಣ್ಯಗಳನ್ನು ತುಂಬಿಕೊಂಡು ಮತ್ತೆ ಪೆಟ್ಟಿಗೆ ಮುಚ್ಚಿ ನಾಯಿಯನ್ನು ಅದರ ಮೇಲೆ ಕೂರಿಸಿದ.

ತರುವಾಯ ಆತನು ಎರಡನೇ ಕೋಣೆಗೆ ಹೋದ. ಅಲ್ಲಿ ಗಾಡಿಯ ಚಕ್ರಗಳ ಗಾತ್ರ ಕಣ್ಣುಗಳುಳ್ಳ ನಾಯಿ ಭಯಂಕರವಾಗಿ ನೋಡಿತು. ಮೊದಲಿನಂತೆಯೇ ಆ ನಾಯಿಯನ್ನೂ ರತ್ನಗಂಬಳಿಯ ಮೇಲೆ ಮಲಗಿಸಿ, ಪೆಟ್ಟಿಗೆ ಮುಚ್ಚಳ ತೆಗೆದರೆ ನಾಣ್ಯಗಳ ಹೊಳಪು ಅವನ ಕಣ್ಣು ಕುಕ್ಕಿತು. ಕಿಸೆಗಳಲ್ಲಿದ್ದ ತಾಮ್ರದ ನಾಣ್ಯಗಳನ್ನು ಅಲ್ಲಿಯೇ ಬಿಸುಟು ಎಲ್ಲಾ ಕಿಸೆಗಳಲ್ಲಿಯೂ, ಬೆಳ್ಳಿಯ ನಾಣ್ಯಗಳನ್ನು ತುಂಬಿಕೊಂಡ. ಯಥಾಪ್ರಕಾರ ಪೆಟ್ಟಿಗೆ ಮುಚ್ಚಿ ನಾಯಿಯನ್ನೂ ಅದರ ಮೇಲೆ ಕೂರಿಸಿ ರತ್ನಗಂಬಳಿಯೊಡನೆ ಮೂರನೇ ಕೋಣೆಗೆ ಬಂದ.

ಇಲ್ಲಿ ಕಾವಲು ಇದ್ದ ನಾಯಿ ಸಾಮಾನ್ಯವಾದುದಲ್ಲ. ಬ್ರಹ್ಮರಾಕ್ಷಸಿಯಷ್ಟು ಭಯಂಕರವಾದದ್ದು! ಇದರ ಕಣ್ಣುಗಳು ಗುಡಿಗೋಪುರಗಳಷ್ಟು ದೊಡ್ಡವು. ಬೆಂಕಿ ಕಾರುತ್ತಿದ್ದುವು. ಇದನ್ನು ನೋಡಿ ಸಿಪಾಯಿಗೆ ಸ್ವಲ್ಪ ಹೆದರಿಕೆಯಾದರೂ ಎದೆ ಗಟ್ಟಿಮಾಡಿಕೊಂಡ ಅದನ್ನೂ ರತ್ನಗಂಬಳಿ ಹಾಸಿ ಮಲಗಿಸಿ, ಪೆಟ್ಟಿಗೆ ತೆಗೆದ. ಅದರ ತುಂಬಾ



ಬಂಗಾರದ ನಾಣ್ಯಗಳಿದ್ದುವು. ಸಿಪಾಯಿಗೆ ಆನಂದವೇ ಆನಂದ. ಕಣ್ಣುಗಳು ಮಿಂಚಿದುವು. ಕೂಡಲೇ ತನ್ನಲ್ಲಿದ್ದ ಬೆಳ್ಳಿ ನಾಣ್ಯಗಳನ್ನೆಲ್ಲಾ ಬಿಸುಟು, ಜೇಬು, ಚೀಲ, ಟೋಪಿ, ಜೋಡು, ಮತ್ತೆ ಎಲ್ಲೆಲ್ಲಿ ತುಂಬಿಸಿಕೊಳ್ಳಲು ಸಾಧ್ಯವೋ ಅಲ್ಲೆಲ್ಲಾ ಬಂಗಾರದ ನಾಣ್ಯಗಳನ್ನು ತುಂಬಿಕೊಂಡ. ತರುವಾಯ ಪೆಟ್ಟಿಗೆಯ ಮುಚ್ಚಳವನ್ನು ಹಾಕಿ, ನಾಯಿಯನ್ನು ಅದರ ಮೇಲಿರಿಸಿದ. ಗಿಡದ ಅಂಚಿಗೆ ಬಂದ. "ದೊಡ್ಡಮ್ಮಾ, ಹಗ್ಗ ಎಳೆ" ಎಂದ. "ಚೆಕುಮುಕಿ ಕಲ್ಲು ತಂದೆಯಾ" ಎಂದು ಕೇಳಿದಳು ಮುದುಕಿ.

"ಮರೆತುಬಿಟ್ಟೆನಲ್ಲಾ" ಎಂದು ಹಿಂದಿರುಗಿ ಚೆಕುಮುಕಿ ಕಲ್ಲನ್ನು ತೆಗೆದುಕೊಂಡು ಬಂದು



"ಹಗ್ಗ ಎಳೆ" ಎಂದ ಸಿಪಾಯಿ. ಮುದುಕಿ ಹಗ್ಗ ಎಳೆದಳು. ಸಿಪಾಯಿ ಹೊರಗೆ ಬಂದ. ಚೆಕುಮುಕಿ ಕಲ್ಲನ್ನು ಮುದುಕಿಗೆ ತೋರಿಸುತ್ತಾ "ಇದೋ, ನಿನ್ನ ಕಲ್ಲು. ಇದರಿಂದ ಏನು ಮಾಡುತ್ತೀಯೇ" ಎಂದು ಕೇಳಿದ.

"ಅದರ ಯೋಚನೆ ನಿನಗೇಕೆ? ನಿನಗೆ ನಾನು ಮಾಡಿದ ಉಪಕಾರಕ್ಕೆ ಬದಲಾಗಿ ನಾನು ಕೇಳಿದ ಚೆಕುಮುಕಿ ಕಲ್ಲು ನನಗೆ ಕೊಡುವುದು ನ್ಯಾಯ. ಆದ್ದರಿಂದ ಆ ಕಲ್ಲು ಕೊಟ್ಟು ನಿನ್ನ ದಾರಿ ನೀನು ಹಿಡಿ." ಎಂದಳು ಮುದುಕಿ. ಕಲ್ಲಿನ ವಿಷಯ ಹೇಳಿದ ಹೊರತು ಕೊಡುವುದಿಲ್ಲ, ಎಂದು ಸಿಪಾಯಿ; "ಹೇಳಿದಂತೆ ಮಾಡು" ಎಂದು ಮುದುಕಿ; ಹೀಗೆ ಜಗಳ ಆರಂಭವಾಯಿತು. ಮುದುಕಿ ಹಟ ಹಿಡಿದದ್ದರಿಂದ, ಸಿಪಾಯಿ ತನ್ನ ಕತ್ತಿಯಿಂದ ಅವಳ ತಲೆ ಕತ್ತರಿಸಿದ.

ಮುದುಕಿಯ ಪೀಡೆ ಕಳೆಯಿತು. ಚೆಕುಮುಕಿ ಕಲ್ಲಿನಲ್ಲಿ ಏನೋ ಗುಟ್ಟಿದೆಯೆಂದು ಸಿಪಾಯಿ ಅದನ್ನು ಜೇಬಿಗೆ ಸೇರಿಸಿದ. ತನ್ನ ಹಣವನ್ನೆಲ್ಲಾ ರತ್ನಗಂಬಳಿಯಲ್ಲಿ ಕಟ್ಟಿ, ಭುಜದ ಮೇಲೆ ಹಾಕಿಕೊಂಡು ಅಲ್ಲಿಗೆ ಸ್ವಲ್ಪ ದೂರದಲ್ಲಿದ್ದ ಊರನ್ನು ಸೇರಿದ.

ಸಿಪಾಯಿಯ ಕೈಯಲ್ಲಿ ಹಣ ತುಂಬ ಇದ್ದುರಿಂದ ದಿನವೂ ಮೃಷ್ಟಾನ್ನ ಭೋಜನ ಮಾಡಿ ರೇಷ್ಮೆ ಬಟ್ಟೆಗಳನ್ನು ಧರಿಸುತ್ತಿದ್ದ. ದೊಡ್ಡ ಮನುಷ್ಯನ ಹಾಗೆ ಕಾಲ ಕಳೆಯುತ್ತಿದ್ದ.

ಆತನ ವೇಷ, ಆತನ ಭಾಗ್ಯವನ್ನು ಕಂಡು ಅನೇಕ ಮಂದಿ ಜನ ಸಿಪಾಯಿಯನ್ನು ಆಶ್ರಯಿಸಿದರು. ಸ್ನೇಹಿತರು ಬಹಳವಾದರು. ಊರಿನಲ್ಲಿ ನಡೆಯುತ್ತಿರುವ ವಿಷಯಗಳನ್ನು ಕುರಿತು ಎಲ್ಲಾ ಆತನೊಂದಿಗೆ ಹರಟೆ ಹೊಡೆಯುತ್ತಿದ್ದರು. ಆ ಊರಿನ ರಾಜನ ತ್ರಿಲೋಕ ಸುಂದರಿಯಾದ ಮಗಳನ್ನು ಕುರಿತು ಆತನಿಗೆ ಹೇಳಿದರು.

"ಹಾಗಾದರೆ ನಾನು ಆಕೆಯನ್ನು ನೋಡಬೇಕು. ಯಾವಾಗ, ಹೇಗೆ ನೋಡಬಹುದೋ ಹೇಳಿ." ಎಂದು ಸಿಪಾಯಿ ಅವರನ್ನು ಕೇಳಿದ.

ಅದಕ್ಕೆ ಅವರು 'ಎಲಾ ಸಿಪಾಯಿ, ರಾಜಕುಮಾರಿಯನ್ನು ನೋಡುವುದು ಅಷ್ಟು

ಸಲುಭವಾದ ಕಾರ್ಯವಲ್ಲ. ನೊಣ ಸಹ ಹೋಗಲಾರದ ಕಂಚಿನ ಕೋಟೆಯಲ್ಲಿ ಆಕೆ ಇದ್ದಾಳೆ. ಆ ಕೋಟೆಯೊಳಗೆ ಯಾರೂ ಹೋಗಲುಶಕ್ಯವಾಗದಂತೆ, ಸುತ್ತಲೂ ಕಂದಕಗಳನ್ನೂ ಮತ್ತು ಬುರುಜಗಳನ್ನೂ ಕಟ್ಟಿಸಿದ್ದಾರೆ. ಜೋತಿಷ್ಕರು ಲೆಕ್ಕ ಮಾಡಿ ಒಬ್ಬ ಸಾಮಾನ್ಯ ಸಿಪಾಯಿ ಆಕೆಯ ಪತಿಯಾಗುವನೆಂದುಹೇಳಿದರು. ರಾಜನಿಗೆ ಅದು ಸರಿ ಬೀಳಲಿಲ್ಲ. ಅಂತಹ ಕೆಲಸವಾಗದಂತೆ, ಆಕೆಯನ್ನು ಕಂಚಿನ ಕೋಟೆಯಲ್ಲಿ ಬಂಧಿಸಿದ್ದಾರೆ.' ಎಂದು ಹೇಳಿದರು.

ಸಿಪಾಯಿ ಮದುವೆಯಾಗಲು ನಿರ್ಧರಿಸಿದ. ರಾಜನಿಗೆ ಒಂದು ಕಾಗದ ಬರೆದ. ಆದರೆ ಮಹಾರಾಜರು 'ಸಾಧ್ಯವಿಲ್ಲ.' ಎಂದು ಉತ್ತರ ಕಳುಹಿಸಿದರು.

ಇಷ್ಟರಲ್ಲಿ ಸಿಪಾಯಿ ತಂದಿದ್ದ ಹಣವೆಲ್ಲಾ ಮುಗಿದಿತ್ತು. ಕೈಯ್ಯಲ್ಲಿ ಕಾಸಿಲ್ಲದೆ, ರಾತ್ರಿ ಹೊತ್ತು ದೀಪ ಕೂಡ ಇಲ್ಲದೆ ಕಾಲ ಕಳೆಯಬೇಕಾಯಿತು. ಒಂದು ದಿನ ರಾತ್ರಿ ಅವನಿಗೆ ಚುಟ್ಟ ಸೇದುವ ಬುದ್ಧಿ ಉಂಟಾಯಿತು. ಆತನಿಗೆ ಚೆಕುಮುಕಿ ಕಲ್ಲು ಜ್ಞಾಪಕಕ್ಕೆ ಬರಲು, ಕಿಸೆಯಿಂದ ಅದನ್ನು ತೆಗೆದು ಬೆಂಕಿ ಹೊಡೆದ. ಹಾಗೆ ಹೊಡೆದ ಕೂಡಲೇ ಚೆಂಡಿನ ಗಾತ್ರಕಣ್ಣುಳ್ಳನಾಯಿ ಪ್ರತ್ಯಕ್ಷವಾಗಿ 'ಸ್ವಾಮಿ, ನಿಮಗೇನು ಬೇಕೋ, ಹೇಳಿ, ತಂದುಕೊಡುತ್ತೇನೆ' ಎಂದಿತು. ಅವನಿಗೆ ಆಶ್ಚರ್ಯವಾಯಿತು.



'ನನಗೆ ಹಣ ಬೇಕು' ಅಂತ ಕೇಳಿದ. ತಕ್ಷಣವೇ ನಾಯಿ ಹಣ ಹಿಡಿದುಕೊಂಡುಬಂತು.

ಆಗ ಸಿಪಾಯಿಗೆ ಚೆಕುಮುಕಿ ಕಲ್ಲಿನ ಮಹಿಮೆ ತಿಳಿಯಿತು. ಕಲ್ಲನ್ನು ನೆಲದ ಮೇಲೆ ಒಂದು ಸಾರಿ ಗೀಚಿದರೆ ತಾಮ್ರದ ನಾಣ್ಯಗಳಿದ್ದ ಕೋಣೆಯ ನಾಯಿ ಬರುತ್ತಿತ್ತು. ಎರಡುಸಾರಿ ಗೀಚಿದರೆ ಬೆಳ್ಳಿ ನಾಣ್ಯಗಳಿದ್ದ ಕೊಠಡಿಯ ನಾಯಿ, ಮೂರುಸಾರಿ ಗೀಚಿದರೆ ಬಂಗಾರದ ನಾಣ್ಯಗಳಿದ್ದ ಕೋಣೆಯ ನಾಯಿ ಬರುತ್ತಿತ್ತು.

ಈ ವಿಧವಾಗಿ ಸಿಪಾಯಿ ಮೂರು ನಾಯಿಗಳಿಂದಲೂ ಸೇವೆ ಮಾಡಿಸಿಕೊಳ್ಳುತ್ತಿದ್ದ. ಹಣ ತರಿಸಿಕೊಳ್ಳುತ್ತಿದ್ದ. ಅಟ್ಟಹಾಸದಿಂದ ಜೀವನ ಮಾಡುತ್ತಿದ್ದ.



ಮತ್ತೆ ಈಗ ಸಿಪಾಯಿಯ ಮನಸ್ಸು ರಾಜಕುಮಾರಿಯ ಕಡೆ ಹರಿಯಿತು.

ಚೆಂಡಿನ ಗಾತ್ರ ಕಣ್ಣುಳ್ಳ ನಾಯಿಯನ್ನು ಬರಮಾಡಿದ. ತನ್ನ ಆಶೆ ತಿಳಿಸಿದ ಒಂದು ಕ್ಷಣದಲ್ಲಿ ಆ ನಾಯಿ ನಿದ್ದೆ ಮಾಡುತ್ತಿದ್ದ ರಾಜ ಕುಮಾರಿಯನ್ನು ಕರೆದುಕೊಂಡು ಬಂತು. ರಾಜಕುಮಾರಿಯ ಅಂದಚಂದಗಳನ್ನು ಕಣ್ಣಾರೆ ಕಂಡು ಸಂತೋಷಪಟ್ಟ. ಮತ್ತೆ ರಾಜಕುಮಾರಿಯನ್ನು ಅರಮನೆಯಲ್ಲಿ ಬಿಟ್ಟು ಬರುವಂತೆ ನಾಯಿಗೆ ಹೇಳಿದ ಸಿಪಾಯಿ. ಆ ನಾಯಿ ಆಕೆಯನ್ನು ಕಂಚಿನ ಕೋಟೆಯ ಲ್ಲಿರಿಸಿ ಬಂದಿತು.

ಮರು ದಿನ ಊಟ ಮಾಡುತ್ತಿರುವಾಗ ರಾಜಕುಮಾರಿ ತಂದೆ ತಾಯಿಯರಿಗೆ ಹಿಂದಿನ ರಾತ್ರಿ ತನಗೆ ಒಂದು ಕನಸು ಬಂದಿ ತೆಂದೂ, ಆ ಕನಸಿನಲ್ಲಿ ಒಂದು ನಾಯಿ, ಒಬ್ಬ ಸಿಪಾಯಿ ಕಾಣಿಸಿದರೆಂದೂ, ಅವನು ತನ್ನ ಕೈ ಹಿಡಿದುಕೊಂಡನೆಂದೂ ಹೇಳಿದಳು.

'ಓ ಹೋ, ಇದರಲ್ಲೇನೋ ತಮಾಷೆ ಯಿದೆ. ನಿಜ ತಿಳಿಯಬೇಕು' ಎಂದು ರಾಣಿ ಮುದುಕಿಯೊಬ್ಬಳನ್ನು ರಾಜಕುಮಾ ರಿಯ ಕೋಣೆಗೆ ಕಾವಲಿರಿಸಿದಳು.

ಮರುದಿನವೂ ರಾಜಕುಮಾರಿಯನ್ನು ನೋಡಬೇಕೆಂದು ಆಶೆಯಾಯಿತು ನಮ್ಮ ಸಿಪಾಯಿಗೆ. ಇಂದೂ ಸಹ ನಾಯಿ ರಾಜ ಕುಮಾರಿಯನ್ನು ಕೊಂಡೊಯ್ಯಿತು. ಆದರೆ ಅದರ ಜಾಡೆ ತಿಳಿದ ಮುದುಕಿ ಆ ನಾಯಿ ಯನ್ನು ಹಿಂಬಾಲಿಸಿದಳು. ಇದ್ದಿಲಿನಿಂದ ಸಿಪಾಯಿಯ ಮನೆಯ ಬಾಗಿಲಿನ ಮೇಲೆ ಗುರುತು ಮಾಡಿ, ಸಮಾಚಾರವನ್ನು ಮಹಾ ರಾಜರಿಗೆ ತಿಳಿಸಿದಳು.

ಮರುದಿನ ಮನೆಯನ್ನು ಗುರುತು ಹಿಡಿ ಯಲು ರಾಜ ಮತ್ತು ರಾಣಿ ತಾವೇ ತಮ್ಮ ಪರಿವಾರದೊಂದಿಗೆ ಬಂದರು. ಆದರೆ ಆ ಬೀದಿಯ ಎಲ್ಲ ಮನೆಗಳ ಮೇಲೂ ಇದ್ದಿಲಿನ ಗುರುತು ಇದ್ದುವು. ರಾಜಕುಮಾ ರಿಯನ್ನು ಹೊತ್ತು ತಂದ ನಾಯಿಯೇ ಈ ರೀತಿ ಮಾಡಿತ್ತು. ಆದ್ದರಿಂದ ಅವರು ಮನೆ ಯನ್ನು ಕಂಡುಹಿಡಿಯಲು ಆಗಲಿಲ್ಲ.

ರಾಣಿ ಒಂದು ಉಪಾಯ ಮಾಡಿದಳು. ಒಂದು ಸಣ್ಣ ರೇಷ್ಮೆ ಚೀಲವನ್ನು ಹೊಲಿದು

అదరల్లి ಹಿಟ್ಟು ತುಂಬಿಸಿ, ರಾಜಕುಮಾರಿಗೆ ತಿಳಿಯದಂತೆ ಆಕೆಯ ಕೊರಳಿಗೆ ಕಟ್ಟಿದಳು.

ಮೂರನೇ ದಿನ ನಾಯಿ ಬಂದು ರಾಜ ಕುಮಾರಿಯನ್ನು ಬೆನ್ನಿನ ಮೇಲೆ ಕೂರಿಸಿ ಕೊಂಡು ಸಿಪಾಯಿಯ ಬಳಿಗೆ ಕರೆದುಕೊಂಡು ಹೋಯಿತು. ರಾಣಿ ಕಟ್ಟಿದ್ದ ಆ ಹಿಟ್ಟಿನ ಚೀಲಕ್ಕೆ ಒಂದು ಸಣ್ಣ ರಂಧ್ರ ಇತ್ತು. ದಾರಿ ಉದ್ದಕ್ಕೂ ಆ ಹಿಟ್ಟು ಚೆಲ್ಲಿತು. ಈ ಗುಟ್ಟಾದ ಗುರುತು ನಾಯಿಗೆ ತಿಳಿಯಲಿಲ್ಲ. ಪಾಪ.

ಚೀಲದಿಂದ ಹಿಟ್ಟು ಚೆಲ್ಲಿದ್ದರಿಂದ ಈ ಸಲ ರಾಜ ರಾಣಿಯರು ಸುಲಭವಾಗಿ ಮನೆಯನ್ನು ಪತ್ತೆ ಮಾಡಿದರು. ಸಿಪಾಯಿಯನ್ನು ಒಡ ನೆಯೇ ಬಂಧಿಸಿ ಗಲ್ಲಿಗೇರಿಸುವಂತೆ ರಾಜನು ಆಜ್ಞೆ ಮಾಡಿದ.

ಮರುದಿನ ಕಾರಾಗಾರದ ಕಾವಲು ಗಾರನು ಬಂದು 'ನಾಳೆ ನಿನ್ನನ್ನು ಗಲ್ಲಿಗೆ ಏರಿಸುವರು' ಎಂದು ಸಿಪಾಯಿಗೆ ಹೇಳಿದ. ಸಿಪಾಯಿಗೆ ಏನೂ ತೋಚಲಿಲ್ಲ. ಚಕುಮುಕಿ ಕಲ್ಲನ್ನು ಮನೆಯಲ್ಲೇ ಮರೆತು ಬಂದೆನಲ್ಲಾ ಎಂದು ಸಂತಾಪಪಟ್ಟ.

ಸಿಪಾಯಿಯನ್ನು ಗಲ್ಲಿಗೇರಿಸುವ ದಿನ ಬಂತು. ಜೈಲಿನ ಕಟಕಟೆಯಿಂದ ನೋಡಿ ದರೆ, ಉರುಲು ಹಾಕುವ ತನ್ನನ್ನು ನೋಡಲು ಜನ ಗುಂಪು ಗುಂಪಾಗಿ ಬರುತ್ತಿರುವುದು ಕಾಣಿಸಿತು.

ಅವರಲ್ಲೊಬ್ಬ ಹುಡುಗನು ಗಲ್ಲಿಗೇರಿಸುವ ಸ್ಥಳಕ್ಕೆ ಓಡುತ್ತಿದ್ದ. ಅವನನ್ನು ಸಿಪಾಯಿ



ಕೂಗಿ "ಮಗೂ ಯಾಕೆ ಇಷ್ಟು ಅವಸರ. ನನ್ನನ್ನೇ ಅಲ್ಲವೇ ಗಲ್ಲಿಗೇರಿಸುವುದು. ನಾನು ಹೋಗದೆ ಅಲ್ಲಿ ನಡೆಯುವ ತಮಾಷೆ ಯಾದರೂ ಏನು? ನನಗೆ ಒಂದು ಸಣ್ಣ ಕೆಲಸ ಮಾಡಿಕೊಟ್ಟರೆ, ನಾನು ನಿನಗೆ ಒಂದು ರೂಪಾಯಿ ಇನಾಮು ಕೊಡುವೆನು" ಎಂದು ಹೇಳಿದ.

ಹುಡುಗ ಸಂತೋಷದಿಂದ ಒಪ್ಪಿಕೊಂಡ.

ಸಿಪಾಯಿ ತನ್ನ ಮನೆ ಗುರುತನ್ನು ಹೇಳಿ, ಅಲ್ಲಿದ್ದ ಚಕುಮುಕಿ ಕಲ್ಲನ್ನು ತಂದುಕೊಡು ವಂತೆ ಹೇಳಿದ.

ಒಂದು ನಿಮಿಷದಲ್ಲಿ ಹುಡುಗ ಆ ಕಲ್ಲನ್ನು ತಂದುಕೊಟ್ಟು, ಇನಾಮು ತೆಗೆದುಕೊಂಡು ಓಡಿದ.

ಗಲ್ಲಿಗೇರಿಸುವ ಸಮಯಕ್ಕೆ ಜನಸಂದಣಿ ಬಹಳ ಹೆಚ್ಚಾಗಿ ಸೇರಿತ್ತು. ಸಿಪಾಯಿಯ ಕೊರಳಿಗೆ ಉರುಲು ಹಾಕಿದರು. ಆಗ ಸಿಪಾಯಿ ಸಾಯುವ ಮುನ್ನ ತನಗೆ ಒಂದು ಕೋರಿಕೆ ಇರುವುದೆಂದು ರಾಜನಲ್ಲಿ ಮನವಿ ಮಾಡಿಕೊಂಡ. "ಮಹಾಪ್ರಭೂ! ಒಂದು ಚುಟ್ಟ ಸೇದುವ ಆಶೆಯಿದೆ ಅದು ಮುಗಿದ ಒಡನೆ ನೀವು ನನ್ನನ್ನು ಗಲ್ಲಿಗೇರಿಸಬಹುದು." ಎಂದ.

ರಾಜ 'ಇಷ್ಟೇಯೇ! ಸರಿ' ಎಂದು ಅಪ್ಪಣೆ ಕೊಟ್ಟ.

ಆಗ ಸಿಪಾಯಿ ಚೆಕುಮುಕಿ ಕಲ್ಲನ್ನು ನೆಲದ ಮೇಲೆ ಆರು ಸಾರಿ ಗೀಚಿದ. ಭಯಂಕರ ವಾದ ಮೂರು ನಾಯಿಗಳೂ ಕಾಣಿಸಿ ಕೊಂಡುವು.

ಸಿಪಾಯಿ ಸನ್ನೆ ಮಾಡಿದ ಕೂಡಲೇ ಮೂರು ನಾಯಿಗಳೂ ಅಲ್ಲಿ ನೆರೆದಿದ್ದ ಜನರ ಮೇಲೆ ಹಾರಿ, ಅವರನ್ನು ಕಿತ್ತು ಹಿಂಸಿಸ ಲಾರಂಭಿಸಿದವು. ಜನರೆಲ್ಲಾ ಗಾಭರಿ ಯಾಗಿ ಚೆಲ್ಲಾಪಿಲ್ಲಿಯಾಗಿ ಓಡಿದರು. ನಾಯಿಗಳನ್ನು ಅಡಗಿಸಲಾಗಲಿಲ್ಲ.

ರಾಜನಿಗೂ ಭಯ ಉಂಟಾಯಿತು. "ಅಪ್ಪಾ, ಸಿಪಾಯಿ ನಿನಗೆ ಪುಣ್ಯ ಬರುತ್ತದೆ. ನಿನ್ನ ನಾಯಿಗಳನ್ನು ಹತ್ತಿರ ಕರೆದುಕೊಂಡು ಅವನ್ನು ಕಟ್ಟಿಹಾಕು. ಈಗಲೇ, ನಿನಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡು ವೆನು. ನನ್ನ ರಾಜ್ಯವನ್ನೂ ನಿನಗೆ ಕೊಡು ವೆನು" ಎಂದು ದಮ್ಮಯ್ಯಗುಡ್ಡೆ ಹಾಕಿದ ಮೇಲೆ ಸಿಪಾಯಿ ಅವನ್ನು ಮಾಯ ಮಾಡಿದ.

ರಾಜನು ಆತನನ್ನು ಕುದುರೆ ಸಾರೋಟಿ ನಲ್ಲಿ ಕರೆದುಕೊಂಡು ಹೋಗಿ ರಾಜಕುಮಾರಿ ಯನ್ನು ಕೊಟ್ಟು ವೈಭವದಿಂದ ಮದುವೆ ಮಾಡಿದ.

ರಾಜನು ತನ್ನ ಮಗಳನ್ನು ಕಂಚಿನ ಕೋಟೆ ಯಲ್ಲಿ ಮುಚ್ಚಿಟ್ಟು ಕಾವಲಿರಿಸಿದ್ದರೂ ಸಹ ಬ್ರಹ್ಮ ಬರೆದ ಪ್ರಕಾರ ಆಕೆಯನ್ನು ಸಿಪಾ ಯಿಗೆ ಕೊಟ್ಟು ಮದುವೆ ಮಾಡಲೇ ಬೇಕಾಗಿ ಬಂತು.






ಪೂರ್ವಕಾಲದಲ್ಲಿ ಒಬ್ಬ ರಾಜನಿದ್ದ. ಆತ ಅಲಂಕಾರ ವಿದ್ಯಾರ್ಥಿ. ನೋಡುವುದಕ್ಕೆ ಲಕ್ಷಣವಾಗಿದ್ದ. ಆದರೆ ಆತ ನಿರಕ್ಷರ ಕುಕ್ಷಿ. ಎದೆ ಸೀಳಿದರೂಎರಡಕ್ಷರವಿಲ್ಲ. ಮತ್ತೂ ಹೇಳಬೇಕೆಂದರೆ ಸಾಮಾನ್ಯಮಾನವನಿಗೆ ಇರಬೇಕಾದಷ್ಟು ತಿಳುವಳಿಕೆಯೂ ಇರಲಿಲ್ಲ. ಹರಿ-ಹರಾದಿಗಳು ಬಂದು ಹೇಳಿದರೂ ಕೇಳದ ಮಹಾಮೂರ್ಖ. ಇಂಥಹವನ ಸಂಗಡ ಬಾಳುವವರಿಗೆ ಮಹಾ ಕಷ್ಟವಾಗಿತ್ತು.

ಒಂದುದಿನ ಆ ರಾಜ ಬೇಟೆಗೆ ಹೋದ. ಅಡವಿಯಲ್ಲಿ ಒಂದು ದೊಡ್ಡ ಕೋತಿ ಕಾಣಿಸಿತು. ಅದು ಮನುಷ್ಯನ ಹಾಗೆ ನಿಂತಿತ್ತು.

ಆ ಕೋತಿ ಮೆಲ್ಲನೆ ಅಡಿಗಳಿಡುತ್ತಾ ಅತ್ತಿಂದ ಇತ್ತ ನಡೆಯುತ್ತಾ ಇದ್ದರೆ ರಾಜ ಅದರಕಡೆ ಆಶ್ಚರ್ಯದಿಂದ ನೋಡುತ್ತಿದ್ದ. ಹಾಗೆ ನೋಡಿದಷ್ಟು ಆತನಿಗೆ ಅದರಮೇಲೆ ಅಭಿಮಾನ ಉಂಟಾಯಿತು. 'ಇಂಥಹ ವಿಚಿತ್ರ ಜಂತು ನಮ್ಮ ಆಸ್ಥಾನದಲ್ಲಿ ಇದ್ದರೆ ಎಷ್ಟು ಚೆನ್ನ' ಎಂದು ಎನ್ನಿಸಿತು.

ಕೂಡಲೇ ಅದನ್ನು ಹಿಡಿಯುವಂತೆ ಭಟರಿಗೆ ಆಜ್ಞಾಪಿಸಿದನು. 'ಇದೇನು ರಾಜನಿಗೆ ಬುದ್ಧಿ ಹೋಯಿತೇ? ಪೌರುಷತೋರಿಸಬೇಕಾದರೆ ಹುಲಿಯನ್ನು ಹಿಡಿಯಬೇಕು. ಬರೀ ಆಟಕ್ಕಾದರೆ ಜಿಂಕೆಯನ್ನೋ, ಕಾಡು ಹಂದಿಯನ್ನೋ ಹೊಡೆಯಬೇಕು. ಅಷ್ಟೇ ಹೊರತು, ಕೋತಿಯನ್ನು ಹಿಡಿಯುವುದೇನು ನಾಚಿಕೆಗೇಡು. ಎಲ್ಲೂ ಕೇಳಿಲ್ಲ; ಕಂಡಿಲ್ಲ.' ಎಂದು ಬೇಟೆಗಾರರೆಲ್ಲಾ ಮರೆಯಲ್ಲಿ ಆಡಿಕೊಂಡರು. ಆಡಿಕೊಂಡರೆ ಆದ ಲಾಭವೇನು? ರಾಜಾಜ್ಞೆಯನ್ನು ಮೀರುವಂತಿಲ್ಲ. ಆತನ ಇಷ್ಟಪ್ರಕಾರ ಆ ಕೋತಿಯನ್ನು ಉಪಾಯದಿಂದ ಹಿಡಿದುಕೊಂಡು ಕೋಟೆಗೆ ಹೋದರು.

ನಗರವನ್ನು ಸೇರಿದ ಕೂಡಲೇ ರಾಜ ತನ್ನ ಮಂತ್ರಿಯನ್ನು ಕರೆಕಳುಹಿಸಿ, "ಓ ಮಂತ್ರಿ, ಈತನು ಯಾರೆಂದುಕೊಂಡಿರುವೆ. ನರನನ್ನು ಮೀರಿಸಿದ ವಾನರ. ಆ ಕಾಲುಗಳ ಆಕಾರ ನೋಡು. ಆ ಖಂಡ ಪುಷ್ಟಿ ನೋಡು. ಮನುಷ್ಯನಿಗೂ ಆತನಿಗೂ ಇರುವ

ಶ್ರೀಮತಿ ಪಿ. ವಿ. ಪಾರ್ವತೀದೇವಿ.



ಎಂದು ಹೇಳುತ್ತಾರೆ ಹಿರಿಯರು. ಹಾಗಿರು ವಲ್ಲಿ ನಮ್ಮ ಕೋತಿಗೆ ಗರುಡಿ ಕಲಿಸಿ, ಕತ್ತಿ ಕಠಾರಿಗಳನ್ನು ಕೈಗೆ ಕೊಟ್ಟರೆ ಕ್ಷೇಮವೇ? ಅದೆಲ್ಲಾ ಅಪಾಯಕರ. ಆದ್ದರಿಂದ ನಮ್ಮ ವಾನರ ಶಿಖಾಮಣಿಯನ್ನು ವಿನೋದಕ್ಕಾಗಿ ಜಂತುಶಾಲೆಯಲ್ಲಿ ಇಟ್ಟರೆ ಎಲ್ಲರೂ ನೋಡಿ ಆನಂದಿಸುವರು. ಹಾಗೆ ಮಾಡುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ" ಎಂದು ಅರಿಕೆ ಮಾಡಿಕೊಂಡ.

ಮೂರ್ಖನಾದ ರಾಜನಿಗೆ ಮಂತ್ರಿಯ ಮಾತುಗಳೊಂದೂ ಹಿಡಿಸಲಿಲ್ಲ. ತನ್ನ ಆಜ್ಞೆಯನ್ನು ನೆರವೇರಿಸಲೇಬೇಕೆಂದು ಮತ್ತೆ ಒತ್ತಿ ಹೇಳಿದ. ಮತ್ತೇನೂ ಮಾಡಲಾರದೆ ಮಂತ್ರಿ ಕೋತಿಗೆ ಸಕಲ ವಿದ್ಯೆಗಳನ್ನೂ ಕಲಿಸಿಕೊಡಲು ದ್ರೋಣಾಚಾರ್ಯರನ್ನು ಮೀರಿಸಿದ ಒಬ್ಬ ಪ್ರವೀಣನನ್ನು ನಿಯಮಿಸಿದ. ಎಲ್ಲ ವಿದ್ಯೆಗಳನ್ನೂ ಅದು ಸರಾಗವಾಗಿ ಕಲಿಯಿತು.

ವಾನರ ಶಿಖಾಮಣಿಗೆ ಎಷ್ಟರ ಮಟ್ಟಿಗೆ ವಿದ್ಯೆಬಂದಿದೆ ನೋಡಬೇಕೆಂದು ರಾಜನಿಗೆ ಆಶೆ ಆಯಿತು. ಪರೀಕ್ಷೆಗೆ ಬೇಕಾದ ಏರ್ಪಾಟುಗಳೆಲ್ಲವೂ ನಡೆದುವು. ದರ್ಬಾರು ಜನಸ್ತೋಮದಿಂದ ತುಂಬಿತ್ತು. "ಆಚಾರ್ಯರೇ, ಇನ್ನು ನಿಮ್ಮ ಶಿಷ್ಯನಿಗೆ ತನ್ನ ವಿದ್ಯಾ ಪಾಂಡಿತ್ಯವನ್ನು ಪ್ರದರ್ಶಿಸುವಂತೆ ಹೇಳಿ, ನೋಡುವ." ಎಂದ ರಾಜ.

ವ್ಯತ್ಯಾಸವೇನು. ಮನುಷ್ಯನಿಗೆ ಇರುವಷ್ಟೇ ತಿಳುವಳಿಕೆ ಆತನಿಗೂ ಇರುವಂತೆ ಕಾಣಿಸುತ್ತದೆ. ಆದ್ದರಿಂದ ಈತನನ್ನು ನಮ್ಮ ಗರುಡಿಗೆ ಕಳುಹಿಸಿ ಕುಸ್ತಿ, ಕಸರತ್ತು, ಕತ್ತಿವರಸೆ ಮೊದಲಾದ ಸಮಸ್ತ ವಿದ್ಯೆಗಳಲ್ಲಿ ತರಪೇತು ಕೊಟ್ಟದ್ದೇ ಆದರೆ ದೊಡ್ಡ ವಸ್ತಾದಿ ಆಗುತ್ತಾನೆ. ಇಂತಹ ದೊಡ್ಡ ವಸ್ತಾದಿ ನಮ್ಮ ಆಸ್ಥಾನದಲ್ಲಿರುವನೆಂದರೆ ನಮಗೆಷ್ಟು ಕೀರ್ತಿ!" ಎಂದು ಉತ್ಸಾಹದಿಂದ ಹೇಳಿ ಮಂತ್ರಿಯನ್ನು ನೋಡಿದ.

ರಾಜನ ಮಾತನ್ನು ಕೇಳಿದ ತರುವಾಯ ಮಂತ್ರಿ "ಮಹಾ ಪ್ರಭೂ, ತಾವುಹೇಳಿದುದೆಲ್ಲಾ ಸೊಗಸಾಗಿದೆ. ಆದರೆ ನಾಯಿ ಮತ್ತು ಕೋತಿಗಳ ಬುದ್ಧಿಯು ಸ್ಥಿರವಲ್ಲ



ಆಗ ಗುರುಗಳು ತಮ್ಮ ಶಿಷ್ಯನಿಗೆ, ಒಂದು ಮರದ ಮೇಲೆ ಇದ್ದ ಒಂದು ಗುಬ್ಬಚ್ಚಿಯನ್ನು ತೋರಿಸಿ ಅದನ್ನು ಹೊಡಿದು ಬರುವಂತೆ ಸನ್ನೆ ಮಾಡಿದರು. ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ವಾನರನು ಸಭೆಯಲ್ಲಿ ಎಲ್ಲರಿಗೂ ಆಶ್ಚರ್ಯವಾಗುವಂತೆ ಒರೆಯಿಂದ ಸರಕ್ಕನೆ ಕತ್ತಿಯನ್ನು ತೆಗೆದು, ಮರವನ್ನು ಹತ್ತಿ ಪಕ್ಷಿಯ ತಲೆಯನ್ನು ಕತ್ತರಿಸಿದ. ಪಕ್ಷಿಯ ರುಂಡ, ಮುಂಡಗಳು ಬೇರೆ ಬೇರೆಯಾಗಿ ಬಿದ್ದುವು. ವಾನರನ ಚಾಕಚಕ್ಯತೆಗೆ ಎಲ್ಲರೂ 'ಭೇಷ್, ಭೇಷ್' ಎಂದು ಚಪ್ಪಾಳೆ ತಟ್ಟಿದರು. ರಾಜನ ಆನಂದಕ್ಕೆ ಮೇರೆಯೇ ಇರಲಿಲ್ಲ. 'ನೋಡಿದೆಯಾ, ನಮ್ಮ ವಾನರನ ಚಾಕಚಕ್ಯತೆ' ಎಂಬಂತೆ ಆತ ಮಂತ್ರಿಯ ಕಡೆ ಒಂದು ನೋಟ ಬೀರಿದ. ಆದರೆ ಮಾತ್ರಿಗೆ ಒಳಗೇ ಅನುಮಾನ. ಸಮಾಧಾನ ಹೇಳಲು ಇದು ಸಮಯವಲ್ಲ ಎಂದು ಮಂತ್ರಿ ಸುಮ್ಮನಿದ್ದ.

ಮರುದಿನ ಮಹಾರಾಜನು ಸಭೆಯಲ್ಲಿ ವಾನರನಿಗೆ ಅಖಂಡವಾದ ಸನ್ಮಾನ ನಡೆಸಿ, ಬೆಲೆ ಬಾಳುವ ಬಟ್ಟೆಬರೆಗಳಿಂದ ಅಲಂಕಾರ ಮಾಡಿಸಿದ. ತನ್ನ ಕೊರಳಲ್ಲಿದ್ದ ರತ್ನಹಾರವನ್ನು ತೆಗೆದು, ತುಂಬಿದ ಸಭೆಯಲ್ಲಿ ತಾನೇ ಆ ವಾನರ ವೀರನ ಕೊರಳಿಗೆ ಅಲಂಕರಿಸಿದ. ಕೊನೆಯಲ್ಲಿ ಉತ್ಸಾಹ ತಡೆಯಲಾರದೆ ಎದ್ದು "ಈ ವೀರಾಗ್ರೇಸರನನ್ನು ನಮ್ಮ ಅಂಗರಕ್ಷಕನನ್ನಾಗಿ ನೇಮಿಸಿ ಗೌರವಿಸುತ್ತೇವೆ." ಎಂದು ಸಭೆಯಲ್ಲಿ ಪ್ರಕಟಿಸಿ ವಾನರನಿಗೂ ತನಗೂ ಇದ್ದ ಆಪ್ತತೆಯನ್ನು ತೋರಿಸಿದ.

ರಾಜನ ಚೇಷ್ಟೆಗೆ ದರ್ಬಾರಿನಲ್ಲಿದ್ದವರೆಲ್ಲರೂ ಚಕಿತರಾದರು. ಮೂಗಿನ ಮೇಲೆ ಬೆರಳಿಟ್ಟುಕೊಂಡರು.

ಪ್ರಭುಗಳು ಕೇಳಲಿ, ಬಿಡಲಿ, ತನ್ನ ಕರ್ತವ್ಯವನ್ನು ನೆರವೇರಿಸಬೇಕೆಂಬ ದೃಢ ಸಂಕಲ್ಪದಿಂದ ಮತ್ತೆ ಮಂತ್ರಿ "ಮಹಾರಾಜ! ಅಂಗರಕ್ಷಕನೆಂದರೆ ಬಹಳ ದೊಡ್ಡ ಪದವಿ. ಸರ್ವ ಕಾಲದಲ್ಲೂ ಒಟ್ಟಿಗೆ ಇದ್ದು, ಯಾವ ಆಪತ್ತೂ ಯಜಮಾನನಿಗೆ ಆಗದಂತೆ ರಕ್ಷಿಸಬೇಕು. ಪ್ರಭುಗಳ ದರ್ಶನ ಪಡೆಯ ಬರುವವರಲ್ಲಿ ಒಳ್ಳೆಯವರು ಯಾರು, ದುರ್ಮಾ



ತಾನು ಎಲ್ಲಿಗೆ ಹೋದರೂ, ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗಿ ಆಸ್ಥಾನ ವಾನರ ವೀರನ ಕೈಲಿ ಕಸರತ್ತು ಮಾಡಿಸಿ, ಕತ್ತಿ ವರಸೆ, ಮಾಡಿಸಿ ಕೊಂಡಾಡುತ್ತಿದ್ದ. ಇಂತಹ ವೀರನನ್ನು 'ಅಂಗರಕ್ಷಕ'ನಾಗಿ ನಿಯಮಿಸಿ ಕೊಂಡಿದ್ದಕ್ಕೆ ಎಲ್ಲರೂ ರಾಜನ ಅದೃಷ್ಟವನ್ನು ಮೆಚ್ಚಿ ಕೊಳ್ಳುತ್ತಿದ್ದರು.

ಹೀಗಿರುವಲ್ಲಿ ಮಹಾರಾಜ ವರ್ಧಂತಿ ಬಂತು. ರಾಜನಿಗೆ ಆ ಸಂದರ್ಭದಲ್ಲಿ ಎಲ್ಲರೂ ಅಪರೂಪವಾದ ಕಾಣಿಕೆಗಳನ್ನು ಸಲ್ಲಿಸಿದರು. ಅವರಲ್ಲಿ ಒಬ್ಬ ಹೂವಾಡಿಗ ಕಾಣಿಕೆಯಾಗಿ ತಂದ ಹೂವಿನ ಹಾರ ಬಹಳ ಸೊಗಸಾಗಿ ಸುವಾಸನೆಯಿಂದ ಕೂಡಿತ್ತು. ಸಭೆಯೆಲ್ಲವೂ ಅದರ ಪರಿಮಳದಿಂದ ಘಮ ಘಮಿಸುತ್ತಿತ್ತು. ಆದ್ದರಿಂದ ಆ ಮಾಲಿಕೆ ಯನ್ನು ರಾಜನು ಕೊರಳಿನಿಂದ ತೆಗೆಯಲೇ ಇಲ್ಲ.

ಅಂದು ನಡೆದ ಉತ್ಸವ ವಿನೋದಗಳಿಂದ ರಾಜನಿಗೆ ಆಯಾಸ ಆಯಿತು. ಹೊತ್ತಿಗೆ ಮುಂಚೆ ನಿದ್ದೆ ಬಂತು. ಅಂಗರಕ್ಷಕನಾದ ವಾನರನನ್ನು ಕೂಗಿ "ಸ್ವಲ್ಪ ಹೊತ್ತು ಮಲಗಿ ಕೊಳ್ಳುವೆನು. ಯಾರನ್ನೂ ಒಳಗೆ ಬಿಡ ಬೇಡ." ಎಂದು ಹೇಳಿದ ರಾಜ. ತನ್ನ ಕೊರಳಿನಲ್ಲಿದ್ದ ಹಾರವನ್ನು ತೆಗೆಯದೆಯೇ ಹಂಸತೂಲಿಕಾತಲ್ಪದ ಮೇಲೆ ಮಲಗಿ ನಿದ್ದೆ ಹೋದ. ನಿದ್ರೆಯೂ ಬೇಗನೇ ಬಂದಿತು.

ರ್ಗಿಗಳು ಯಾರು ಎಂಬುದನ್ನು ಅರಿತುಕೊ ಳ್ಳುವ ತಿಳುವಳಿಕೆ ಇರಬೇಕು. ಅಷ್ಟು ವಿವೇ ಚನಾ ಶಕ್ತಿ ಕೋತಿಗೆ ಎಲ್ಲಿಂದ ಬರಬೇಕು. ಆದ್ದರಿಂದ ನಮ್ಮ ವಾನರನ ಚಾಕಚಕ್ಯತೆ ಯನ್ನು ನೋಡಿ ಆನಂದಪಡಬೇಕೇ ಹೊರತು, ಅವನಿಗೆ ಅಂಗರಕ್ಷಕನ ಪದವಿ ಕೊಡುವುದು ಬಹಳ ಅನುಚಿತ" ಎಂದು ಬಹಳ ಗಂಭೀರನಾಗಿ ರಾಜನಲ್ಲಿ ಪ್ರಾರ್ಥನೆ ಮಾಡಿ ಕೊಂಡ.

ಈ ಸಲಹೆಗಳು ಯಾವುವೂ ರಾಜನ ತಲೆಗೆ ಹತ್ತಲಿಲ್ಲ. 'ಸರಿ, ನಮಗೇನು.' ಎಂದು ಮಂತ್ರಿ ಹೊರಟುಹೋದ. ನಾಲ್ಕು ಜನ ಬೇಡವೆಂದಷ್ಟೂ ರಾಜನಿಗೆ ಕೋತಿಯ ಮೇಲೆ ಅಭಿಮಾನ ಹೆಚ್ಚಾಗುತ್ತಾ ಬಂತು.



ರಾಜಾಜ್ಞೆ ಪ್ರಕಾರ ಅಂಗರಕ್ಷಕನು ಸಾವಿರ ಕಣ್ಣುಗಳಿಂದ ಕಾಯುತ್ತಿದ್ದ. ರಾಜನು ನಿದ್ದೆ ಮಾಡುತ್ತಿರುವಾಗ ಯಾರೂ ಒಳಗೆ ಹೋಗಲಿಲ್ಲ. ಆದರೆ ಹೂವಿನ ಪರಿಮಳಕ್ಕೆ ಎಲ್ಲಿಂದಲೋ ಒಂದು ದುಂಬಿಯು ಮಾತ್ರ 'ಝುಂ ಯ್' ಎಂದು ಶಬ್ದ ಮಾಡಿಕೊಂಡು ಅಲ್ಲಿಗೆ ಬಂದಿತು.

ಅಂಗರಕ್ಷಕ ಆ ದುಂಬಿಯನ್ನು ಎಷ್ಟೋ ವಿಧದಲ್ಲಿ ಅಟಕಾಯಿಸಿದ. ಆದರೆ ಅದು ಹೇಗೋ ತಪ್ಪಿಸಿಕೊಂಡು, ರಾಜನ ಕೊರಳಿನಲ್ಲಿದ್ದ ಹಾರದ ಮೇಲೆ ಕೂತಿತು.

ಪೌರುಷವಂತನಾದ ವಾನರ ವೀರನಿಗೆ ಬಹಳ ಕೋಪ ಬಂತು. "ಹಾಂ, ನಾನು ಇಲ್ಲಿ ಕಾವಲು ಇರುವಾಗ ನೀನು ಕೋಣೆಯಲ್ಲಿ ಪ್ರವೇಶಿಸಲು ಎಷ್ಟು ಧೈರ್ಯ. ರಾಜಾಜ್ಞೆಯೆಂದರೆ ಏನೆಂದು ತಿಳಿದೆ? ಅಂತ ವಾಯುವೇಗದಿಂದ ಹೋಗಿ, ಹೂವಿನ ಮಾಲೆಯ ಮೇಲಿದ್ದ ದುಂಬಿಯನ್ನು ಎರಡು ತುಂಡಾಗಿ ಒಂದೇ ಏಟಿಗೆ ಕತ್ತರಿಸಿದ!

ದುಂಬಿಯೊಂದಿಗೆ ರಾಜನ ಕಂಠವೂ ಎರಡು ತುಂಡಾಯಿತು! ಹಂಸತೂಲಿಕಾತಲ್ಪವೆಲ್ಲವೂ ರಕ್ತ ಮಯವಾಯಿತು.

ರಾಜಾಜ್ಞೆಯ ಪ್ರಕಾರ ನಮ್ಮ ವಾನರ ವೀರನು ಕೋಣೆಯ ಹೊಸ್ತಿಲಲ್ಲಿ ಕಾವಲಿರುವೆನೆಂದು ಸಂತೋಷಿಸುತ್ತಿದ್ದ. ಆದರೆ ತನ್ನ ತಿಳಿಗೇಡಿತನದಿಂದ ಯಜಮಾನನ ಪ್ರಾಣವು ಹೋದ ವಿಷಯವನ್ನು ಗಮನಿಸಲೇ ಇಲ್ಲ.

ಕಡೆಗೆ, ರಾಜನ ಪ್ರಾಣವು ಹೋಯಿತು. ಇನ್ನು ಈಗ ಯಾರು ತಾನೇ ಏನು ಮಾಡಬಲ್ಲರು? ಮಾಡಿದರೆ ಮಾತ್ರ ಸತ್ತ ರಾಜ ಮತ್ತೆ ಬರುವನೇ? ಆದುದರಿಂದಲೇ ಯಾರಾದರೂ ನಾಲ್ಕು ಜನ ಹೇಳಿದಂತೆ ನಡೆಯಬೇಕೇ ಹೊರತು, ಮೂರ್ಖತೆಯಿಂದ ಕೆಲಸ ಮಾಡಬಾರದು. "ಹಾಗಲ್ಲ, ನನ್ನಿಷ್ಟ ಬಂದಹಾಗೆ ಮಾಡುವೆನು. ಒಬ್ಬರು ನನಗೆ ಹೇಳುವುದೇನು." ಎಂದು ಗರ್ವಪಟ್ಟರೆ, ರಾಜನಿಗೆ ಆದ ಹಾಗೆ ಶಿಕ್ಷೆಯಾಗುವುದು. ಆದ್ದರಿಂದ ಮಕ್ಕಳಿರಾ! ನೀವು ರಾಜನಂತೆ ಮೂರ್ಖರಾಗಿ ಹಟ ಹಿಡಿಯಬೇಡಿ.



# ಮಂತ್ರಿಪದವಿ



ಒಂದು ದೇಶವನ್ನು ಒಬ್ಬ ಬಾದಷಹನು ಪಾಲಿಸುತ್ತಿದ್ದ. ಆತನಿಗೆ ಚತುರನಾದ ಒಬ್ಬ ಮಂತ್ರಿ ಬೇಕಾಗಿತ್ತು. ಮಂತ್ರಿ ಪದವಿಗೆ ಯೋಗ್ಯರು ಬೇಕೆಂದು ರಾಜ್ಯದಲ್ಲಿ ಡಂಗುರ ಹೊಡಿಸಿದ. ಎಷ್ಟೋ ಮಂದಿ ಬಂದರು. ಬಂದವರನ್ನೆಲ್ಲಾ ಬಾದಷಹ ಪರೀಕ್ಷೆ ಮಾಡಿದ. ಆದರೆ ಪರೀಕ್ಷೆಯಲ್ಲಿ ಯಾರೂ ಯಶಸ್ವಿಯಾಗಲಿಲ್ಲ.

ಕೊನೆಗೆ ಒಬ್ಬ ಮುಲ್ಲಾ, ಒಬ್ಬ ಮಾರ್‍ವಾಡಿ ಇಬ್ಬರು ಉಳಿದರು. "ಸರಿ, ನಿಮ್ಮಿಬ್ಬರನ್ನು ಪರೀಕ್ಷೆ ಮಾಡುವೆವು. ಯಾರು ಯಶಸ್ವಿ ಆದರೆ ಅವರಿಗೆ ನಮ್ಮ ರಾಜ್ಯದ ಮಂತ್ರಿ ಪದವಿ ಕೊಡುತ್ತೇವೆ." ಎಂದು ಅವರೊಂದಿಗೆ ಬಾದಷಹ ಹೇಳಿದ.

ಮರುದಿನ ಬಾದಷಹನು ಎರಡು ಬುಟ್ಟಿಗಳನ್ನು ತರಿಸಿದ. ಪ್ರತಿಯೊಂದು ಬುಟ್ಟಿಯಲ್ಲೂ ಐವತ್ತು ಐವತ್ತು ಚಕ್ಕುಲಿಗಳನ್ನು ಇಟ್ಟು, ಅವನ್ನು ನೆರೆ ಊರುಗಳಲ್ಲಿದ್ದ ತನ್ನ ಕುವರಿಯರಿಗೆ ಕೊಟ್ಟು ಬರುವಂತೆ ಮುಲ್ಲಾ ಮತ್ತು ಮಾರ್ವಾಡಿಯನ್ನು ಕಳುಹಿಸಿದ.

ಬಾದಷಹನ ಆಜ್ಞೆ ಪ್ರಕಾರ ಚಕ್ಕುಲಿ ತುಂಬಿದ ಬುಟ್ಟಿಗಳನ್ನು ಪಕ್ಕದ ಊರಿನಲ್ಲಿ ಕೊಟ್ಟು ಸಾಯಂಕಾಲವೇ ಇಬ್ಬರೂ ಮರಳಿ ಬಂದರು. ಮುಲ್ಲಾ ತೆಗೆದುಕೊಂಡು ಬಂದ ರಸೀತಿಯಲ್ಲಿ ನಲವತ್ತೈದು ಚಕ್ಕುಲಿಗಳು ಮಾತ್ರವೇ ಸೇರಿದಹಾಗೆ ಬರೆದಿತ್ತು.

'ಮಿಕ್ಕ ಐದು ಏನಾದುವು?' ಎಂದು ರಾಜ ಪ್ರಶ್ನೆ ಮಾಡಿದ.

"ಮಹಾ ಪ್ರಭೂ! ಕ್ಷಮಿಸಬೇಕು. ಮಧ್ಯೆ ದಾರಿಯಲ್ಲಿ ಹಸಿವು ಆಯಿತು. ಆದ್ದರಿಂದ ಐದು ಚಕ್ಕುಲಿಗಳನ್ನು ನಾನು ತಿಂದ ಮಾತು ನಿಜ" ಎಂದು ಮುಲ್ಲಾ ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡ.

ಬಾದಷಹನು ಮುಲ್ಲಾನ ಅವಿವೇಕಕ್ಕೆ ಮತ್ತು ಭೋಳಾತನಕ್ಕೆ ಒಳಗೊಳಗೆ ನಕ್ಕು 'ಯುಕ್ತಿ ಅರಿಯದ ಪೆದ್ದ ಮಂತ್ರಿ ಪದವಿಯನ್ನು ಹೇಗೆ ನಿರ್ವಹಿಸಬಲ್ಲನು?' ಎಂದು ಅಂದುಕೊಂಡ.

ತರುವಾಯ ಮಾರ್ವಾಡಿಯ ಕಡೆ ತಿರುಗಿ "ಮತ್ತೆ, ನಿನಗೆ ಮಾತ್ರ ದಾರಿಯಲ್ಲಿ ಹಸಿವು

ಶ್ರೀ ಕೆ. ವಿ. ಸಾಂಬಮೂರ್ತಿ.

ಆಗಲಿಲ್ಲವೇ? ದೂರ ಪ್ರಯಾಣ.'' ಎಂದು ಕೇಳಿದ.

ಅದಕ್ಕೆ ಮಾರ್ವಾಡಿ "ಆಗದೇನು 'ಪ್ರಭು! ಮಾನವಜನ್ಮವನ್ನು ಎತ್ತಿದ ಪ್ರತಿಯೊಬ್ಬರಿಗೂ ಹಸಿವುಂಟು. ನನಗೆ ಕೊಟ್ಟು ಬರುವಂತೆ ಹೇಳಿದ ಚಕ್ಕುಲಿಯಲ್ಲಿ ನಾನು ಕೆಲವನ್ನು ತಿಂದು ಹಸಿವನ್ನು ಇಂಗಿಸಿಕೊಂಡೆ. ಜಾಗರೂಕತೆಯಿಂದ ಪ್ರತಿಯೊಂದರ ಅಂಚುಗಳನ್ನು ಮಾತ್ರ ತಿಂದೆನಾದ್ದರಿಂದ, ಸ್ವರೂಪ ಚಿಕ್ಕದಾಯಿತೇ ಹೊರತು, ಲೆಕ್ಕ ಕಡಿಮೆ ಬರಲಿಲ್ಲ. ಬೇರೆ ವಿಧಿಯಿಲ್ಲದೆ ಹೀಗೆ ಮಾಡಬೇಕಾಯಿತು ಮಹಾಸ್ವಾಮಿ. ಮಹಾರಾಜರವರು ಅನ್ಯಥಾ ಭಾವಿಸಬಾರದು'' ಎಂದು ತಾನು ಮಾಡಿದ ತಪ್ಪನ್ನು ಚಾಲಾಕಾಗಿ ವಿಧೇಯತೆಯಿಂದ ಹೇಳಿ ಸಮರ್ಥಿಸಿಕೊಂಡ.

ಇದನ್ನು ಕೇಳಿ ಬಾದಷಹನು ಮನದಲ್ಲಿ ಬಹಳ ಸಂತೋಷಪಟ್ಟುಕೊಂಡ.

ಇಬ್ಬರಲ್ಲಿಯೂ ಇರುವ ಬುದ್ಧಿವಂತಿಕೆ ಈಗ ಬಾದಷಹನಿಗೆ ತಿಳಿಯಿತು. ಈ ಸಲ ಅವರನ್ನು ಮತ್ತೊಂದು ಪರೀಕ್ಷೆ ಮಾಡಿ ನೋಡೋಣವೆಂದು ಅವರಿಗೆ ತಿಳಿಯದೆ ಎರಡು ಚೀಲಗಳಲ್ಲಿ ಬೂದಿಯನ್ನು ತುಂಬಿಸಿ ಅವನ್ನು ನೆರೆಯ ನಾಡಿನ ನವಾಬರಿಗೆ ಕೊಟ್ಟು ಬರುವಂತೆ ಕಳುಹಿಸಿದ.

"ಇದು ಒಂದು ಅರ್ಥವಿಲ್ಲದ್ದ ಕೆಲಸವಾಗಿ ಕಾಣಿಸಿದರೂ ಬುದ್ಧಿವಂತನಿಗೂ, ಆಲೋಚನಾಶಕ್ತಿ ಇಲ್ಲದವನಿಗೂ ಇರುವ ಬೇಧವನ್ನು ಕಂಡುಹಿಡಿಯಲು ಉತ್ತಮ ಪರೀಕ್ಷೆ.' ಎಂದು ನಿರ್ಧರಿಸಿದ.



ಮುಲ್ಲಾ ಬಾದಷಹನಿತ್ತ ಚೀಲವನ್ನು ನವಾಬನಿಗೆ ಸಮರ್ಪಿಸಿ ಕೈ ಮುಗಿದ. ಆತನು ಅದನ್ನು ಬಿಚ್ಚಿ ನೋಡಿ "ಏನಯ್ಯಾ, ಇದು. ಬೂದಿ ತೆಗೆದುಕೊಂಡು ಬಂದಿದ್ದೀಯೇ? ಅರ್ಥವಿಲ್ಲದೆ? ನಿನಗೆ ಏನಾದರೂ ಹುಚ್ಚು ಹಿಡಿಯಿತೆ?'' ಎಂದು ಗದರಿಸಿದನು.

ಮುಲ್ಲಾ ನಡಗುತ್ತಾ "ಮಹಾರಾಜ, ಬಾದಷಹರು ಚೀಲವನ್ನು ಕೊಟ್ಟುಬರುವಂತೆ ಹೇಳಿದರು. ಅಷ್ಟೇ ಹೊರತು, ಚೀಲದಲ್ಲಿ ಏನಿರುವುದೋ ನನಗೇನು ಗೊತ್ತು?'' ಎಂದು ಹೇಳಿದ.

ಇದರಲ್ಲಿ ಯಾವುದೋಅಮೂಲ್ಯ ವಸ್ತು ಇಟ್ಟು ಬಾದಷಹರು ಕಳುಹಿಸಿರಬಹುದು. ಇವನು ಅದನ್ನು ಎಗರಿಸಿ ಬೂದಿ ತುಂಬಿ ಕೊಂಡು ಬಂದಿದ್ದಾನೆ ಎಂದು ರಾಜನಿಗೆ ಅನುಮಾನವಾಯಿತು. ಮುಲ್ಲಾನನ್ನು ಅವಮಾನಿಸಿ, ಛೀಮಾರಿಹಾಕಿ ಕಳುಹಿಸಿದನು.

ಮಾರ್ವಾಡಿಯೂ ಸಹ ತನಗೆ ಕೊಟ್ಟ ಚೀಲವನ್ನು ತೆಗೆದುಕೊಂಡು ಹೋಗಿ ಇನ್ನೊಬ್ಬ ನವಾಬನಿಗೆ ಸಮರ್ಪಿಸಿದ. ಅದರಲ್ಲಿ ಏನಿದೆಯೋ ಮೊದಲು ಆತನಿಗೂ ತಿಳಿಯದು.

ಚೀಲ ಬಿಚ್ಚಿದ ಕೂಡಲೇ ಈ ನವಾಬನೂ ಸಹ ಆತನ ಕಡೆ ದುರುಗುಟ್ಟಿಕೊಂಡು ನೋಡಿ "ಇದೇನಯ್ಯಾ, ಬೂದಿ ತಂದಿದ್ದೀ? ಇದೇ ಏನು ನಿಮ್ಮ ಬಾದಷಹರು ನನಗೆ ಕಳುಹಿಸಿದ ಕಾಣಿಕೆ." ಎಂದ.

ಮಾರ್ವಾಡಿ ಯುಕ್ತಿವಂತ. ಪರಿಸ್ಥಿತಿ ಗ್ರಹಿಸಿ "ಪ್ರಭೂ, ನಮ್ಮ ಬಾದಷಹರು ಈ ಮಧ್ಯೆ ಮಕ್ಕಾ ಯಾತ್ರೆ ಮುಗಿಸಿಕೊಂಡು ಬಂದರು. ಅಲ್ಲಿಂದ ತಂದ ಪವಿತ್ರ ಭಸ್ಮವನ್ನು ಪ್ರತ್ಯೇಕವಾಗಿ ಆಳುವ ಮಹಾಸ್ವಾಮಿಯವರಿಗೆ ಕಳುಹಿಸಿಕೊಟ್ಟಿದ್ದಾರೆ. ಎಂದು ನಂಬಿಕೆ ಉಂಟಾಗುವಂತೆ ನುಡಿದ.

ನವಾಬನು ಬಹಳ ಸಂತೋಷಪಟ್ಟನು. ಬಾದಷಹನ ಪರವಾಗಿ ಬಂದಿದ್ದ ಮಾರ್ವಾಡಿಯನ್ನು ಎಷ್ಟೋ ವಿಧಗಳಲ್ಲಿ ಗೌರವಿಸಿ, ಕಪ್ಪ ಕಾಣಿಕೆಗಳನ್ನು ಕೊಟ್ಟು, ಬಹಳ ಮರ್ಯಾದೆಯಿಂದ ಕಳುಹಿಸಿದನು.

ಮುಲ್ಲಾ ಮತ್ತು ಮಾರ್ವಾಡಿ ಇಬ್ಬರೂ ತಿರುಗಿ ಬಂದರು. ನವಾಬನು ಕಳುಹಿಸಿಕೊಟ್ಟ ಕಾಣಿಕೆಯನ್ನು ಮಾರ್ವಾಡಿ ಬಾದಷಹರಿಗೆ ಸಂತೋಷದಿಂದ ಅರ್ಪಿಸಿದನು. ಮುಲ್ಲಾ ಜೋಲುಮುಖ ಹಾಕಿಕೊಂಡು ದೈನ್ಯತೆಯಿಂದ ನಿಂತುಕೊಂಡನು.

ಬಾದಷಹ ಇಬ್ಬರಲ್ಲಿ ಯಾರನ್ನು ಮಂತ್ರಿಯನ್ನಾಗಿ ಆರಿಸಿಕೊಂಡ? ನೀವೇ ಆಲೋಚಿಸಿ ಹೇಳಿ.!



# ಚಂದಮಾಮ ಸ್ಪರ್ಧೆ

(ಮಕ್ಕಳ ಭಾಷಾಭಿವೃದ್ಧಿಗೆ)

## ಆಧಾರಗಳು

* ಎಡದಿಂದ ಬಲಕ್ಕೆ *

೪. ದರಿದ್ರದ ದುಃಖ

೫. ಒಂದು ಬಗೆಯ ದುಂಬಿ.

೫. ಸಾಮಾನು.

೮. ಮೋಸಗಾರನ ಪ್ರತಿಜ್ಞೆ.

| | | | | | | |
|---|---|---|---|---|---|---|
| ■ | [1] ಗಂ | ■ | [2] | ■ | [3] ಕು | ■ |
| [4] ಬ | | | | | | ಗೆ |
| ■ | | ■ | ಸು | ■ | | ■ |
| [5] | | ಡ | ■ | [6] ದಿ | | |
| ■ | | ■ | [7] ಶ | ■ | | ■ |
| [8] ಕ | | | | | | ಥ |
| ■ | ಕ್ಷಿ | ■ | | ■ | ತ್ರು | ■ |

* ಮೇಲಿನಿಂದ ಕೆಳಕ್ಕೆ *

೧. ಮೈಸೂರು ಬಾವುಟದ ಮೇಲಿದೆ.

೨. ನಿದ್ರೆಯಲ್ಲಿ ಕಾಣಬಹುದು.

೩. ಬಹಳ ಧನಿಕನ ಧನಕ್ಕೆ ಇದು ಹೇಳುತ್ತಾರೆ.

೭. ಮಲಗುವುದು.

## ರಂಗೋಲಿ



ಆರ್. ಪದ್ಮ



ಟಿ. ಎಸ್. ಪ್ರೇಮಾ.




# ಮಕ್ಕಳ ಬೆಳವಣಿಗೆ

## ನೈರ್ಮಲ್ಯ

ಮಕ್ಕಳು ಒಳ್ಳೆಯ ನಡತೆಗಳನ್ನು ಕಲಿಯಬೇಕೆಂದು ಹೇಳಿದ್ದಾಯಿತು. ಅದರಲ್ಲಿ ಮೊದಲು ಕಲಿಯಬೇಕಾದ್ದು ಚೊಕ್ಕಟವಾಗಿರುವುದು. ಶರೀರವನ್ನು ಚೊಕ್ಕಟವಾಗಿರಿಸಿಕೊಂಡಲ್ಲಿ ಮನಸ್ಸು ನಿರ್ಮಲವಾಗಿರುತ್ತೆ.

ಶರೀರವನ್ನು ಚೊಕ್ಕಟವಾಗಿರಿಸಿಕೊಳ್ಳಬೇಕಾದರೆ ಮಾಡಬೇಕಾದ್ದು ಸ್ನಾನ. ಸ್ನಾನದಿಂದ ಶರೀರ ಮಾತ್ರ ಚೊಕ್ಕಟವಾಗುವುದಲ್ಲದೆ ಚಟುವಟಿಕೆಯೂ ಹುಟ್ಟಿ ಬುದ್ಧಿ ಚುರುಕಾಗುತ್ತೆ. ಬುದ್ಧಿ ಚುರುಕಾದರೆ ಒಳ್ಳೆ ಆಲೋಚನೆಗಳು ಬರುತ್ತವೆ. ಸೋಮಾರಿತನ ಹೋಗುತ್ತೆ. ತಲೆ ನೋವು ಬೇಜಾರು ಕಳೆದು ಹೋಗಿ ಚುರುಕುತನ ಬರುತ್ತೆ. ಇದಕ್ಕೆಲ್ಲಾ ಸ್ನಾನ ಅಗತ್ಯ.

ಇದರಿಂದ ಸ್ನಾನ ಎಷ್ಟು ಮುಖ್ಯವೋ ಆಲೋಚಿಸಿ ನೋಡಿ. ಇಂತಹ ಮುಖ್ಯವಾದ ಕೆಲಸವನ್ನು ಹಲವು ಮಂದಿ ಸೋಮಾರಿಗಳಾಗಿ ನಾಲ್ಕಾರು ದಿನಗಳವರೆಗೂ ಮಾಡುವುದಿಲ್ಲ. ಅಂತಹವರು ಅನಾರೋಗ್ಯದಿಂದ ನರಳುತ್ತಾರೆ. ಪಶುಗಳಿಗೂ ಸಹ ಸ್ನಾನ ಮುಖ್ಯವಾದ್ದರಿಂದ ಅವನ್ನೂ ದಿನಕ್ಕೆ ಒಂದು ಸಲವಾದರೂ ತೊಳೆಯುತ್ತಾರೆ. ಪಕ್ಷಿಗಳು ಸಹ ಸ್ನಾನಮಾಡುವುದನ್ನು ನಾವು ಆಗಾಗ್ಗೆ ನೋಡಬಹುದು.

ಊಟ ಉಡುಪುಗಳಿಗಿಂತ ಸ್ನಾನ ಮುಖ್ಯ. ಶರೀರದಲ್ಲಿನ ಕೊಳೆ ಮಾತ್ರ ಹೋಗುವುದಲ್ಲದೆ, ಹೊಸ ಹುರುಪು, ಉತ್ಸಾಹಗಳು ಉಂಟಾಗುತ್ತವೆ. ಮಿಕ್ಕ ವಿಷಯಗಳನ್ನು ಮುಂದಿನ ಸಲ ಬರೆಯುತ್ತೇನೆ.

---

ನಿಮ್ಮ ಅಕ್ಕ.

---




ಮೇಲಿರುವ ಒಂಬತ್ತು ಚಿತ್ರಗಳೂ ಒಂದೇ ರೀತಿಯಾಗಿ ಕಾಣಿಸುತ್ತೆ. ಎರಡು ಮಾತ್ರ ಒಂದೇ ರೀತಿ ಇವೆ. ಮಿಕ್ಕವು ಇಲ್ಲ. ಅವೆರಡನ್ನು ಕಂಡುಕೊಳ್ಳಿ.

ಉತ್ತರ ೪೯ ಪೇಜಿನಲ್ಲಿ ನೋಡಿ.



# ವಿಜ್ಞಾನದ ವಿನೋದಗಳು

ಮಕ್ಕಳೇ!

ಮೈಲುತುತ್ತದಿಂದ ಆಗಬಹುದಾದ ಇನ್ನು ಕೆಲವು ತಮಾಷೆಗಳನ್ನು ನೋಡಿ. ಒಂದು ಗಾಜಿನ ಕೊಳವಿಯಲ್ಲಿ ಸ್ವಲ್ಪ ನವಾಸಾಗರ ಹಾಕಿ ಸುಣ್ಣದ ತಿಳಿ ಸೇರಿಸಿ. ಅದರಿಂದ ಘಾಟಾದ ಒಂದು ಬಗೆಯ ವಾಯು ಬರುತ್ತೆ. ಇದನ್ನು ಅಮೋನಿಯಾ ಎನ್ನುತ್ತಾರೆ. ಗಾಜಿನ ಕೊಳವಿಯನ್ನು ಭದ್ರವಾಗಿ ಮುಚ್ಚಿರಿಸಿದಲ್ಲಿ ಆ ಅಮೋನಿಯಾ ನೀರಾಗುತ್ತೆ. ಇದನ್ನು ಹಾಗಿರಿಸಿ.

ಮತ್ತೊಂದು ಕೊಳವಿಯಲ್ಲಿ ನೀರು ಹಾಕಿ ಮೈಲುತುತ್ತ ಬೆರೆಸಿ ದ್ರಾವಕ ಮಾಡಿ. ಎರಡನ್ನೂ ತಯಾರುಮಾಡಿ ಈ ಮೈಲುತುತ್ತದ ದ್ರಾವಕಕ್ಕೆ ಅಮೋನಿಯಾ ದ್ರಾವಕವನ್ನು ತೊಟ್ಟುತೊಟ್ಟಾಗಿ ಬೆರೆಸಿದರೆ ಕ್ರಮವಾಗಿ ಅದರ ಬಣ್ಣ ಎಳೆ ಹಸುರಿನಿಂದ ಅಚ್ಚ ಹಸುರು ಬಣ್ಣದ ದ್ರಾವಕವಾಗುತ್ತೆ. ಅದು ಬಣ್ಣ ಬದಲಾಯಿಸುವ ತಮಾಷೆ ನೋಡಿ.

ಇನ್ನೂ ಚಿತ್ರವಿಚಿತ್ರವಾದ ಬಣ್ಣಗಳು ನೋಡಬೇಕಾದರೆ ಕೆಳಗೆ ಬರೆದಿರುವಂತೆ ಮಾಡಿ ನೋಡಿ.

೧. ಒಂದು ಚಿಕ್ಕ ಪಟಿಕದ ಚೂರು ತೆಗೆದು ಕೆಂಡದ ಮೇಲೆ ಇಡಿ. ಅದು ಉಕ್ಕಿ ದೊಡ್ಡದಾಗುತ್ತೆ. ಆಮೇಲೆ ಒಂದು ಹನಿ ನೀರು ಹಾಕಿ. ಹಾಗೆಯೇ ಎಲ್ಲಾ ಕರಗಿ ಹೋಗುತ್ತದೆ.

೨. ಈ ಕೆಳಗೆ ಬರೆದಿರುವ ಪದಾರ್ಥಗಳನ್ನು ನೀರಿನಲ್ಲಿ ಬೆರೆಸಿ ದ್ರಾವಕ ತಯಾರು ಮಾಡಿ ಇಡಿ. ಕೆಳಗೆ ಬರೆದಂತೆ ಒಂದರಲ್ಲಿ ಒಂದನ್ನು ಬೆರೆಸಿ. ಹೇಗಿರುತ್ತೆ ನೋಡಿ.

ಎಪ್ಸಂಸಾಲ್ಟು — ವಾಷಿಂಗ್ ಸೋಡಾ
ಎಪ್ಸಂಸಾಲ್ಟು — ಸುಣ್ಣದ ತಿಳಿ
ಸುಣ್ಣದ ತಿಳಿ — ವಾಷಿಂಗ್ ಸೋಡಾ.

ಮೇಲಿರುವ ಕೋಟೆಗೆ ಹೋಗಲು ಒಂದೇ ದಾರಿಯಿದೆ. ಆ ದಾರಿ ತೋರಿಸಬಲ್ಲಿರಾ?

| | [1] ಗಂ | | [2] ಕ | | [3] ಕು | |
|---|---|---|---|---|---|---|
| [4] ಬ | ಡ | ತ | ನ | ದ | ಬೇ | ಗೆ |
| | ಭೇ | | ಸು | | ರ | |
| [5] ಜೇ | ರುಂ | ಡ | | [6] ದಿ | ನ | ಸು |
| | ಡ | | [7] ಶ | | ಸಂ | |
| [8] ಕ | ಪ | ಟ | ಯು | ಶ | ಪ | ಥ |
| | ಕ್ಷಿ | | ನ | | ತ್ತು | |



೪೭ ನೇ ಪೇಜಿನ ಬೊಂಬೆಗಳಿಗೆ ಜವಾಬು

೨, ೮ ನೇ ನಂಬರಿನಬೊಂಬೆಗಳು

ಒಂದೇ ಸಮನಾಗಿವೆ.



# ಹಿಂದೀ ನಾಲ್ಕನೆಯ ಪಾಠ

ಮಕ್ಕಳೇ !

ಕಳೆದ ತಿಂಗಳು ಕಾಗುಣಿತ ಕಲಿತಿರಿ. ಈಸಲ ಒತ್ತಕ್ಷರಗಳನ್ನು ಕಲಿಯಿರಿ. ಕೆಳಗಿನ ಬದಲಾವಣೆಗಳನ್ನು ಗಮನಿಸಿ.

| | |
|---|---|
| क + ख - क्ख | ಉದಾಹರಣೆ : मक्खी |
| ग + य - ग्य | — भाग्य |
| म + न - म्न | — निम्न |
| ट + ठ - ट्ठ | — गट्ठा |
| र + ज - र्ज | — कर्ज |
| ज + र - ज्र | — वज्र |
| म + य - म्य | — रम्य |
| व + य - व्य | — नव्य |
| प + य - प्य | — प्यास |
| त + न - त्न | — यत्न |
| व + य = व्य | — व्याघ्र |
| स + व - स्व | — स्वप्न |

ಮೇಲಿನ ಒತ್ತುಗಳನ್ನು ಗಮನಿಸಿ ಆಗಿರುವ ಬದಲಾವಣೆಗಳಿಗೆ ಅನುಕೂಲವಾದ ಹಲವು ನಿಯಮಗಳನ್ನು ಮಾಡಿಕೊಳ್ಳಬಹುದು.

ಪಕ್ಕದಲ್ಲಿ ಗೆರೆ ಇರುವ ಅಕ್ಷರಗಳಿಗೆ ಒತ್ತು ಕೊಡಬೇಕಾದಾಗ ಮೊದಲು ಉಚ್ಚಾರಣೆಯಾಗುವ ಅಕ್ಷರದ ಗೆರೆಯನ್ನು ತೆಗೆದುಹಾಕಿ ಬರೆಯಬೇಕು.

ಉದಾ: **प + य = प्य, प्यास, व + य = व्य, व्यय, म + य = म्य, रम्य**

ಆದರೆ **न** ಒತ್ತು ಮಾತ್ರ ಯಾವಾಗಲೂ ಅಕ್ಷರದ ಕೆಳಗೆ ಸೇರಿಸಬೇಕು.

ಉದಾ: **निम्न, यत्न, जमदग्नि.**

ಪಕ್ಕದಲ್ಲಿ ಗೆರೆ ಇಲ್ಲದ ಅಕ್ಷರಗಳನ್ನು ಒಂದರ ಕೆಳಗೆ ಒಂದನ್ನು ಸೇರಿಸಬೇಕು.

ಉದಾ: **ट + ट = ट्ट — हट्टा - कट्टा, ठ + ठ = ठ्ठ - मठ्ठा, द + द = द्द — गद्दी, ड + ड = ड्ड — गड्डा, ल + ल = ल्ल - लल्ला**

ಈ ವ್ಯತ್ಯಾಸವನ್ನು ಗಮನಿಸಿ.

**कर्ज, वज्र।** ಒಂದು **र + ज = र्ज,** ಎರಡನೆಯದು **ज + र = ज्र**

**ह** ಕ್ಕೆ "ರ" ಒತ್ತು ಹೀಗೆ ಜೋಡಿಸಬೇಕು. — **ह्र, हृ ह्रद, हृदय ।**
**ट, ठ, ड, ढ** ಈ ೪ ಅಕ್ಷರಗಳಿಗೆ ಈ ರೀತಿ —**ट्र ट्राम**

**स + य = स्य** ಒತ್ತಕ್ಷರಗಳನ್ನು ಬರೆಯುವ ಮತ್ತೊಂದು ಕ್ರಮ ಉಂಟು.

ಉದಾ: **स + य = स्य ।**

ಈ ಕೆಳಗೆ ಬರೆದ ಕ್ರಮವನ್ನು ಗಮನಿಸಿ.

**ह + य = ह्य - असह्य ; द + म = द्म - पद्म; द + य = द्य - गद्य**

ಮುಂದಿನ ತಿಂಗಳು ಹೊಸ ಪಾಠ ಕಲಿಯುವಿರಂತೆ. ಈ ಸಲ ಈ ಒತ್ತುಗಳನ್ನು ಚೆನ್ನಾಗಿ ಗಮನಿಸಿರಿ. ಇಲ್ಲವಾದರೆ ಮುಂದೆ ಕಷ್ಟವಾಗುತ್ತೆ.



ಈ ಚಿತ್ರಕ್ಕೆ ಎಲ್ಲೆಲ್ಲಿ ಎಂತೆಂತಹ ಬಣ್ಣ ಹಾಕಬೇಕೋ ನೋಡಿ. ನಿಮಗೆ ಅಂದ ವೆಂದು ಕಂಡ ಬಣ್ಣಗಳನ್ನು ಹಾಕಿರಿಸಿಕೊಳ್ಳಿ. ಮುಂದಿನ ಸಂಚಿಕೆಯಲ್ಲಿ ನಾವು ಬಣ್ಣ ಹಾಕಿಸುತ್ತೇವೆ. ಅದರೊಂದಿಗೆ ಹೋಲಿಸಿ ನೋಡಿ.

Controlling Editor : SRI CHAKRAPANI
Printed and Published by B. NAGI REDDI at the B. N. K. Press, Madras - 1

